

ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೧೧-೧೨ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಕ್ಯಾತನಹಳ್ಳಿ - ಒಂದು ಸಾಂಸ್ಕೃತಿಕ ಅಧ್ಯಯನ


ನಿಬಂಧಕಾರರು

ಮಂಜುನಾಥ ಕೆ.ಎಂ.

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಎನ್.ಮಹೇಶ್ವರಿ

ಸಹಾಯಕ ಪ್ರಾಧ್ಯಾಪಕರು

ಕನ್ನಡ ವಿಭಾಗ, ಜೆ.ಎಸ್.ಎಸ್ ಮಹಿಳಾ ಕಾಲೇಜು

ಚಾಮರಾಜನಗರ





ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೧೨

963




ಕನ್ನಡ ವಿಶ್ವವಿದ್ಯಾಲಯ

ಹಂಪಿ


೨೦೧೧-೧೨ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಕ್ಯಾತನಹಳ್ಳಿ – ಒಂದು ಸಾಂಸ್ಕೃತಿಕ ಅಧ್ಯಯನ


ನಿಬಂಧಕಾರರು

**ಮಂಜುನಾಥ ಕೆ.ಎಂ.**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎನ್. ಮಹೇಶ್ವರಿ**

ಸಹಾಯಕ ಪ್ರಾಧ್ಯಾಪಕರು

ಕನ್ನಡ ವಿಭಾಗ, ಜೆ.ಎಸ್.ಎಸ್. ಮಹಿಳಾ ಕಾಲೇಜು

ಚಾಮರಾಜನಗರ



ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೧೨

## ಅಭ್ಯರ್ಥಿಯ ಘೋಷಣಾ ಪತ್ರ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿ ವಿದ್ಯಾರ್ಥಿಯಾಗಿ ಅಧ್ಯಯನ ಮಾಡುತ್ತಿರುವ ನಾನು ಡಾ. ಎನ್.ಮಹೇಶ್ವರಿ ಅವರ ಮಾರ್ಗದರ್ಶನದಲ್ಲಿ ಎಂ.ಫಿಲ್ ಪದವಿಯ ಒಂದು ಭಾಗವಾದ ನಿಬಂಧ ರಚನೆಗೆ ಸಂಬಂಧಿಸಿದಂತೆ **"ಕ್ಯಾತನಹಳ್ಳಿ - ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ವಿಷಯವನ್ನು ಆಯ್ಕೆಮಾಡಿಕೊಂಡು ಸಂಶೋಧನ ನಿಬಂಧವನ್ನು ಸಿದ್ಧಪಡಿಸಿರುತ್ತೇನೆ. ಈ ಸಂಶೋಧನಾ ನಿಬಂಧವನ್ನು ಈ ಮೊದಲು ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಬೇರಾವುದೇ ಪದವಿ ಅಥವಾ ಡಿಪ್ಲೋಮೋಗಳಿಗಾಗಲಿ ಒಪ್ಪಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮೈಸೂರು
೩೦-೦೫-೨೦೧೨

**(ಮಂಜುನಾಥ ಕೆ.ಎಂ.)**
ಕ್ರಮಸಂಖ್ಯೆ **KVTMKS/00530**
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ದೃಢೀಕರಣ ಪತ್ರ

೨೦೧೧-೧೨ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS/00530**ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ **ಮಂಜುನಾಥ ಕೆ.ಎಂ.** ಅವರು ನನ್ನ ಮಾರ್ಗದರ್ಶನದಲ್ಲಿ **"ಕ್ಯಾತನಹಳ್ಳಿ – ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**ಮೈಸೂರು**
**೩೦-೦೫-೨೦೧೨**

**(ಡಾ. ಎನ್.ಮಹೇಶ್ವರಿ)**
ಮಾರ್ಗದರ್ಶಕರು
ಸಹಾಯಕ ಪ್ರಾಧ್ಯಾಪಕರು
ಕನ್ನಡ ವಿಭಾಗ
ಜೆ.ಎಸ್.ಎಸ್.ಮಹಿಳಾ ಕಾಲೇಜು
ಚಾಮರಾಜನಗರ

# ಕ್ಯಾತನಹಳ್ಳಿ – ಒಂದು ಸಾಂಸ್ಕೃತಿಕ ಅಧ್ಯಯನ

## ಪರಿವಿಡಿ


ಪುಟ ಸಂಖ್ಯೆ

ಅಧ್ಯಾಯ – ೧

ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ : ೧–೧೭
ಸಂಸ್ಕೃತಿ – ವ್ಯಾಖ್ಯಾನಗಳು ಮತ್ತು ಜನಪದ ಸಂಸ್ಕೃತಿ

ಅಧ್ಯಾಯ – ೨

ಭೌಗೋಳಿಕ ಹಿನ್ನೆಲೆ, ಸ್ಥಳನಾಮ ಪುರಾಣ, ಇತಿಹಾಸ, : ೧೮–೨೯
ಪದನಿಷ್ಪತ್ತಿ
ಸಾಮಾಜಿಕ ಜೀವನ ಮತ್ತು ಸಮುದಾಯ

ಅಧ್ಯಾಯ – ೩

ಸಂಪ್ರದಾಯಗಳು, ಆಚರಣೆಗಳು, ನಂಬಿಕೆಗಳು : ೩೦–೪೭
ದೇವಾಲಯಗಳ ಪರಿಚಯ ಮತ್ತು ವೈಶಿಷ್ಟ್ಯತೆ

ಅಧ್ಯಾಯ – ೪ : ೪೮–೭೯

ಜಾನಪದದ ಕಲೆಗಳು
ಸಾಹಿತ್ಯ ಮತ್ತು ಕೊಡುಗೆಗಳು

ಅಧ್ಯಾಯ – ೫

ವ್ಯವಸಾಯ ಪದ್ಧತಿ, ಬೆಳೆಗಳು, ಮಾರುಕಟ್ಟೆ : ೮೦–೮೭
ಆಧುನಿಕ ಪರಿವರ್ತನೆಯ ಹಾದಿಯಲ್ಲಿ ಕ್ಯಾತನಹಳ್ಳಿ

ಉಪಸಂಹಾರ : ೮೮–೮೯

ಅನುಬಂಧಗಳು : ೯೦–೯೫

ವಕ್ತೃಗಳ ಪರಿಚಯ
ಪರಾಮರ್ಶನ ಗ್ರಂಥಗಳು
ಛಾಯಾಚಿತ್ರಗಳು
ನಕ್ಷೆ


*****

# ಅಧ್ಯಾಯ – ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಒಂದು ಸ್ಥಳದ ಸಾಂಸ್ಕೃತಿಕ ಅಧ್ಯಯನದಲ್ಲಿ ಅತ್ಯಂತ ಪ್ರಮುಖವಾದುದು ಮತ್ತು ಮೂಲಭೂತವಾದದ್ದು ಕ್ಷೇತ್ರಕಾರ್ಯ. ಜಾನಪದದ ಎಲ್ಲಾ ಮುಖಗಳನ್ನು ಅದರ ವಾಸ್ತವಾರ್ಥದಲ್ಲಿ ಅರಿಯಲು ಕ್ಷೇತ್ರ ಕಾರ್ಯವನ್ನು ಬಿಟ್ಟರೆ ಬೇರೊಂದು ಮಾರ್ಗವಿಲ್ಲವೆಂದೇ ಹೇಳಬೇಕು. ಬಹಳ ಕಾಲದವರೆಗೆ ಜಾನಪದವನ್ನೂ ಕ್ಷೇತ್ರ ವಿಜ್ಞಾನವೆಂದು ಕರೆಯಲು ಹಿಂಜರಿಯುತ್ತಿದ್ದರು. ಆದರೆ ಈಗ ಆ ಪರಿಸ್ಥಿತಿ ಇಲ್ಲ. ಬೇರೆ ಬೇರೆಕಡೆಗಳಲ್ಲಿ ನಡೆದಿರುವ ಸಂಶೋಧನೆಗಳು ಜಾನಪದವೂ ಒಂದು ಕ್ಷೇತ್ರ ವಿಜ್ಞಾನ ಎಂಬುದನ್ನು ತೋರಿಸಿಕೊಟ್ಟಿದೆ. ಕ್ಷೇತ್ರ ವಿಜ್ಞಾನಗಳೇ ಮಾನವಶಾಸ್ತ್ರ, ಭೂಗೋಳಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಪ್ರಾಕ್ತನಶಾಸ್ತ್ರ, ಸಮಾಜಶಾಸ್ತ್ರಗಳನ್ನು ಪರಿಗಣಿಸಲಾಗಿದೆ. ಇವುಗಳಲ್ಲಿ ಪ್ರತಿಯೊಂದಕ್ಕೂ ವಸ್ತು ಸಂಗ್ರಹಾಲಯದಲ್ಲಿ, ಪ್ರಯೋಗಶಾಲೆಯಲ್ಲಿ ಮತ್ತು ಗ್ರಂಥ ಭಂಡಾರದಲ್ಲಿ ಸಾಕಷ್ಟು ಅಧ್ಯಯನ ಮಾಡಬಹುದಾದರೂ ಕ್ಷೇತ್ರ ಪರಿವೀಕ್ಷಣೆಯಿಲ್ಲದೆ ಸಂಪೂರ್ಣವಾಗುವುದಿಲ್ಲ ಎಂಬುದು ಮುಖ್ಯವಾದ ವಿಚಾರ. ಈ ಸಂದರ್ಭದಲ್ಲಿ ಜಾನಪದ ಕ್ಷೇತ್ರಕಾರ್ಯ ತುರ್ತಾಗಿ ನಡೆಯಬೇಕಾಗಿದೆ. ಕ್ಷೇತ್ರ ಕಾರ್ಯದ ಮಾಹಿತಿಗಳಿಲ್ಲದೆ ಜಾನಪದವು ಒಂದು ಶಿಸ್ತಾಗಿ ಬೆಳೆಯಲು ಸಾಧ್ಯವೇ ಇಲ್ಲ. ಇತಿಹಾಸಕಾರನಿಗೆ ಚಾರಿತ್ರಿಕ ಆಕರಗಳು, ಸಾಹಿತ್ಯ ವಿಮರ್ಶಕರಿಗೆ ಕಾಲಕೃತಿಗಳು ಹೇಗೋ, ಮಾನವಶಾಸ್ತ್ರಜ್ಞನಿಗೆ ಮನುಷ್ಯರು ಹೇಗೋ ಅಂತೆಯೇ ಜಾನಪದ ಸಾಹಿತ್ಯಕ್ಕೂ ಕ್ಷೇತ್ರ ಕಾರ್ಯದ ಮಾಹಿತಿಗಳು ಬೇಕು. ಆದ್ದರಿಂದಲೇ ಜಾನಪದ ಅಧ್ಯಯನದ ಮೊದಲ ಉದ್ದೇಶ ಮತ್ತು ಮುಖ್ಯ ಕೆಲಸ ಕ್ಷೇತ್ರಕಾರ್ಯ.

ಆಕರಗಳು ಅಥವಾ ಮೂಲಸಾಮಗ್ರಿಗಳು ಇರುವಲ್ಲಿಗೇ ಹೋಗಿ ವಿಷಯ ಸಂಗ್ರಹಣೆ ಮಾಡುವುದನ್ನು ಕನ್ನಡದಲ್ಲಿ ಕ್ಷೇತ್ರಕಾರ್ಯವೆಂದು ಕರೆಯಲಾಗುತ್ತದೆ. ಇಂಗ್ಲಿಷಿನಲ್ಲಿ ಇದನ್ನು Field work ಎಂದೂ ಕರೆಯಲಾಗುತ್ತದೆ. ಉದಾಹರಣೆಗೆ: ಎಂ.ಬಿ.ಎಮಿನೊ ೧೯೩೫ರಲ್ಲಿ ಭಾರತಕ್ಕೆ ಬಂದು ಮೂರು ವರ್ಷಗಳ ಕಾಲ ಇಲ್ಲಿನ ಗುಡ್ಡಗಾಡುಗಳ ಆದಿವಾಸಿಗಳ ಜೊತೆ ಅಲೆದಾಡಿ, ಅವರಗೆ ಭಾಷಾವಿಜ್ಞಾನಿಗಳ ಕಣ್ಣಿಗೆ ಅಗೋಚರವಾಗಿದ್ದ ತೊದ, ಕೋತ, ಕೊಡವ, ಕೊಲಾಮಿ ಮುಂತಾದ ಭಾಷೆಗಳನ್ನು ಕಂಡುಹಿಡಿದುದನ್ನೂ, ವೇರಿಯರ್ ಎಲ್ವಿನ್ ಅನೇಕ ಆದಿವಾಸಿ ತಾಂಡ್ಯಗಳ ನಡುವೆ ಇದ್ದು ಅನೇಕ ಅಮೂಲ್ಯ ಶೋಧನೆ ಮಾಡಿದುದನ್ನೂ ನೆನೆಯಬಹುದು.

ಸಂಶೋಧನೆಯ ವಿಷಯ ಮತ್ತು ಸ್ವರೂಪಕ್ಕನುಗುಣವಾಗಿ ಕ್ಷೇತ್ರಕಾರ್ಯಾಚರಣೆ ಬೇರೆ ಬೇರೆ ರೀತಿಯದಾಗಿರುತ್ತದೆ.

ಉದಾ: ೧. ನಮ್ಮ ಅಭ್ಯಾಸ ಒಬ್ಬ ಕವಿಗೆ ಅಥವಾ ಒಬ್ಬ ವ್ಯಕ್ತಿಗೆ ಸಂಬಂಧಿಸಿದ್ದರೆ ನಾವು ಅವನಿಗೆ ಸಂಬಂಧಿಸಿದ ಸ್ಥಳಗಳು, ಅಲ್ಲಿ ಅವನು ಸಂಪರ್ಕ ಪಡೆದ ವ್ಯಕ್ತಿಗಳು, ಅವನ ಬಗೆಗಿರುವ ಐತಿಹ್ಯಗಳು, ಹಸ್ತಪ್ರತಿಗಳು, ಗ್ರಂಥಗಳು, ಶಾಸನ ಕಾಗದ ಪತ್ರಗಳು ಮೊದಲಾದವನ್ನು ಗಮನಿಸಬೇಕಾಗುತ್ತದೆ.

೨. ಜನಾಂಗಿಕ ಅಧ್ಯಯನವಾದರೆ – ಆ ಜನಾಂಗದ ಭಾಷೆ, ವೃತ್ತಿ, ಪರಿಸರ, ಆಚಾರ–ವಿಚಾರ, ಹಬ್ಬ–ಹರಿದಿನ ಮೊದಲಾದುವನ್ನು ಲಕ್ಷಿಸಬೇಕಾಗುತ್ತದೆ. ವಿಷಯಕ್ಕೆ ಸಂಬಂಧಿಸಿದ ಸ್ಥಳ ಅಥವಾ ಕಟ್ಟಡಗಳ ಅವಲೋಕನೆಯೂ ಕ್ಷೇತ್ರಕಾರ್ಯದ ಪ್ರಮುಖ ಅಂಗವಾಗಿದೆ. ಅದೇ ರೀತಿ ವಿಷಯಕ್ಕೆ ಸಂಬಂಧಿಸಿದ ವ್ಯಕ್ತಿಗಳ ಸಂದರ್ಶನ ಮೊದಲಾದವೂ ಸಂಶೋಧನೆಯಲ್ಲಿ ಮಹತ್ವದ ಸ್ಥಾನ ಹೊಂದಿದೆ. ಇವನ್ನು ಸಂಶೋಧಕ ಎಷ್ಟು ವ್ಯಾಪಕವಾಗಿ ನಡೆಸುವನೋ ಅಷ್ಟು ಅವನಿಗೆ ಆ ವಿಷಯದಲ್ಲಿ ಖಚಿತತೆ, ವಿಚಾರದಲ್ಲಿ ಸ್ಪಷ್ಟತೆ ಸಾಧ್ಯವಾಗುತ್ತದೆ. ಆದ್ದರಿಂದ ಅವನ ಸಂಶೋಧನೆಗೆ ಹೆಚ್ಚಿನ ಬೆಲೆ ಬರುತ್ತದೆ.

ನಿಬಂಧದ ರಚನೆಗೆ ತೆಗೆದುಕೊಂಡಿರುವುದು ಸಾಂಸ್ಕೃತಿಕ ಅಧ್ಯಯನ–ವಾದದ್ದರಿಂದ ಕ್ಷೇತ್ರಕಾರ್ಯ ಅತಿಮುಖ್ಯವಾಗಿರುತ್ತದೆ. ಅದಕ್ಕೂ ಮೊದಲು ಪೂರ್ವ–ಸಿದ್ಧತೆಯನ್ನು ಮಾಡಿಕೊಳ್ಳಬೇಕಾಗುತ್ತದೆ. ಕ್ಷೇತ್ರಕಾರ್ಯ ಬಹುವೈವಿಧ್ಯಮಯವಾದ ಕೆಲಸ. ಆದ್ದರಿಂದ ಇದಕ್ಕೆ ಬೇಕಾದ ಎಲ್ಲ ಪೂರ್ವಸಿದ್ದತೆಗಳನ್ನು ಸಂಶೋಧಕ ಆರಂಭದಲ್ಲಿಯೇ ಮಾಡಿಕೊಳ್ಳಬೇಕಾಗುತ್ತದೆ. ಇದರಲ್ಲಿ ಮಾನಸಿಕ, ಕಾಯಿಕ, ವಾಚಿಕ ಎಂಬ ಮೂರು ಕವಲುಗಳುಂಟು. ಕ್ಷೇತ್ರಕಾರ್ಯಕ್ಕೆ ಬೇಕಾದ ಎಲ್ಲಾ ವಸ್ತುಗಳನ್ನು ಇಟ್ಟುಕೊಳ್ಳಬೇಕು. ಹಾಗೂ ಆ ಸ್ಥಳದ ಬಗೆಗೆ ತಿಳಿದುಕೊಂಡಿರಬೇಕು. ಕ್ಷೇತ್ರಕಾರ್ಯಕ್ಕೆ ಸಿದ್ದತೆ ಮಾಡಿಕೊಂಡ ನಂತರ, ಕ್ಷೇತ್ರಕಾರ್ಯಾಚರಣೆಗೆ ತೊಡಗಬೇಕು. ಇಂತಹ ಕ್ಷೇತ್ರಕಾರ್ಯವನ್ನು ಎರಡು ರೀತಿಯಲ್ಲಿ ನಡೆಸಬಹುದು.

೧. ಸಂಗ್ರಹಾಲಯಗಳು

೨. ವ್ಯಕ್ತಿಗಳಿಂದ

೧) ಸಂಗ್ರಹಾಲಯಗಳು:

ಇಲ್ಲಿ ಹಲವು ಅಪೂರ್ವವಾದ ವಸ್ತುಗಳನ್ನು ಸಂಗ್ರಹಿಸಿ ಇಡಲಾಗಿರುತ್ತದೆ. ಅವು ಎಲ್ಲಿ ದೊರೆಯುತ್ತವೆ ಎಂಬುದನ್ನು ಸಂಶೋಧಕ ಪತ್ತೆ ಹಚ್ಚಿ ಅವು ಇರುವಲ್ಲಿಗೇ ಹೋಗಿ, ಅವನ್ನು ನೋಡಿಕೊಂಡು ಬರಬೇಕಾಗುತ್ತದೆ. ಈ ರೀತಿಯ ಕ್ಷೇತ್ರಕಾರ್ಯ ಗ್ರಂಥಾಲಯ, ಹಸ್ತಪ್ರತಿಭಂಡಾರ, ಆರ್ಕಿವ್ಸ್(ಪತ್ರಾಗಾರಗಳು), ವಸ್ತುಸಂಗ್ರಹಾಲಯ (ಮ್ಯೂಜಿಯಂ) ಮೊದಲಾದವುಗಳನ್ನು ಅವಲಂಬಿಸಿರುತ್ತದೆ. ಈ ಅಧ್ಯಯನವು ಇಂತಹ ಸಂಗ್ರಹಾಲಯಗಳ ಅವಶ್ಯಕತೆಯನ್ನು ಕೇಳುತ್ತದೆ. ಸಂಶೋಧನೆಗೆ ಹೆಚ್ಚಿನ ಬಲ, ಶಕ್ತಿ, ನಿಖರತೆ ಬೇಕೆಂದರೆ ಇಂತಹ ವಸ್ತುಗಳಿಂದ ಸಾಧ್ಯವಾಗುತ್ತದೆ. ಇವುಗಳಿಂದ ಹಿಂದೆ ಇದ್ದಂತಹ ಅಥವಾ ನಡೆದಿರುವ ಸಂಶೋಧನೆಗಳನ್ನು ಮತ್ತು ಪೂರಕ ಅಂಶಗಳನ್ನೂ ಸಂಗ್ರಹಿಸಬಹುದಾಗಿದೆ.

೨) ವ್ಯಕ್ತಿಗಳಿಂದ:

ನಮ್ಮ ಸಂಶೋಧನೆಗೆ ಉಪಯೋಗ ಬೀಳಬಹುದಾದ ವ್ಯಕ್ತಿಗಳು ಇರುವ ಕಡೆ ಹೋಗಿ ವಿಷಯಗಳ ಸಂಗ್ರಹಿಸುವುದು ಕ್ಷೇತ್ರಕಾರ್ಯದ ಇನ್ನೊಂದು ವಿಧಾನ. ಇವರುಗಳನ್ನು ವಕ್ತೃಗಳು ಎಂದೂ ಕರೆಯುತ್ತಾರೆ. ಇಂತಹ ವ್ಯಕ್ತಿಗಳಿಂದ ಸಾಮಗ್ರಿಗಳನ್ನು ಸಂಗ್ರಹಿಸುವಲ್ಲಿ ಈ ಸಾಧನಗಳ ಸಹಾಯಕ್ಕೆ ಬರುತ್ತವೆ. ಪ್ರಶ್ನಾವಳಿ ಮತ್ತು ಸಂದರ್ಶನ, ಅವಲೋಕನ ಅಥವಾ ನಿರೀಕ್ಷಣೆ, ನಮೂನೆ ಈ ಮೂರೂ ಅಂಶಗಳು ಸಹಕಾರಿಯಾಗುತ್ತವೆ. ವಿಷಯಕ್ಕೆ ಸಂಬಂಧಿಸಿದ ವ್ಯಕ್ತಿಯನ್ನು ನೇರವಾಗಿ ಕಂಡು ಆತನಿಂದ ವಿಷಯ ಸಂಗ್ರಹಿಸುವಾಗ ಉಪಯೋಗಕ್ಕೆ ಬರುವುವು ಪ್ರಶ್ನಾವಳಿ ಮತ್ತು ಸಂದರ್ಶನಗಳು. ವ್ಯಕ್ತಿಗಳಿಂದ ವಿಷಯವನ್ನು ತಿಳಿದುಕೊಳ್ಳಲಿಕ್ಕೆ ಉತ್ತಮ ಸಾಧನಗಳು. ಪ್ರಶ್ನಾವಳಿಯಲ್ಲಿ ಪ್ರಶ್ನೆಗಳು ಲಿಖಿತ ರೂಪದಲ್ಲಿದ್ದರೆ ಸಂದರ್ಶನದಲ್ಲಿ ಪ್ರಶ್ನೆಗಳು ಸಂಭಾಷಣೆಯ ರೂಪದಲ್ಲಿರುತ್ತವೆ. ಸಂಶೋಧನೆಗೆ ಬೇಕಾದ ಮಾಹಿತಿಯನ್ನು ಸಂಗ್ರಹಿಸುವ ಕಾರ್ಯದಲ್ಲಿ ಪ್ರಶ್ನಾವಳಿ ವಿಫಲವಾದೆಡೆ ಸಂದರ್ಶನ ಯಶಸ್ವಿಯಾಗುತ್ತದೆ. ಸಂಶೋಧಕನಿಗೆ ತನ್ನ ಕ್ಷೇತ್ರದಲ್ಲಿ ಸ್ವತಂತ್ರವಾಗಿ ಮುಂದುವರಿಯುವುದಕ್ಕೂ ಮಾಹಿತಿದಾರನ ವಿಚಾರಗಳನ್ನು, ಪ್ರತಿಕ್ರಿಯೆಗಳನ್ನು ಪ್ರತ್ಯಕ್ಷವಾಗಿ ಅಧ್ಯಯನ ಮಾಡುವುದಕ್ಕೂ ಈ ಸಂದರ್ಶನ ಒಳ್ಳೆಯ ಸಹಾಯಕ. ಸಂಶೋಧಕ ತನ್ನ ಸಂಶೋಧನೆಗೆ ನೆರವಾಗುವ ವ್ಯಕ್ತಿಗಳನ್ನು, ಪ್ರದೇಶಗಳನ್ನು

ಪ್ರತ್ಯಕ್ಷವಾಗಿ ಸಂದರ್ಶಿಸಿ ತನ್ನ ವಿಷಯಕ್ಕೆ ಸಂಬಂಧಿಸಿದ ಹೆಚ್ಚಿನ ಮಾಹಿತಿ ಕೇಳಿ ಪಡೆದುಕೊಳ್ಳುವುದರಿಂದ ಆತನ ಸಂಶೋಧನೆಗೆ ಹೆಚ್ಚಿನ ಆಳ ಮತ್ತು ವಿಸ್ತಾರತೆ ಉಂಟಾಗುತ್ತದೆ.

ಸಂದರ್ಶನದಲ್ಲಿ ಅನೇಕ ಪ್ರಕಾರಗಳನ್ನು ನೋಡಬಹುದು.

- ಯೋಚಿತ ಸಂದರ್ಶನ ಮತ್ತು ತತ್‌ಕ್ಷಣ ಸಂದರ್ಶನ.
- ರಚನಾತ್ಮಕ ಮತ್ತು ಅರಚನಾತ್ಮಕ ಸಂದರ್ಶನ
- ಕೇಂದ್ರೀಕೃತ ಸಂದರ್ಶನ
- ಪುನರಾವರ್ತನ ಸಂದರ್ಶನ
- ಮುಕ್ತಪದ್ಧತಿ ಮತ್ತು ಬದ್ಧಪದ್ಧತಿ.

ಪ್ರಸ್ತುತ ಅಧ್ಯಯನದ ಉದ್ದೇಶ ಪ್ರಮುಖವಾಗಿ ಜಾನಪದಕ್ಕೆ ಸಂಬಂಧಿಸಿದ್ದು ಜಾನಪದೀಯ ಅಂಶಗಳನ್ನು ತೆಗೆದುಕೊಂಡು ಗ್ರಾಮೀಣ ಸಂಸ್ಕೃತಿಯ ಆಂತರಿಕ ಮತ್ತು ಬಾಹ್ಯ ಅಂಶಗಳನ್ನು ಮತ್ತು ಜಾನಪದ ಸಾಹಿತ್ಯದಲ್ಲಿನ ಹಲವಾರು ಅಂಶಗಳನ್ನು ಸಾಧ್ಯವಾದಷ್ಟು ಬಿಡಿಸಿ ಶೋಧಿಸಿ ತೋರಿಸುವುದು ಈ ನಿಬಂಧದ ಪ್ರಮುಖ ಉದ್ದೇಶವಾಗಿದೆ. ಗ್ರಾಮೀಣ ಸಮುದಾಯದಲ್ಲಿನ ಜಾನಪದೀಯ ಅಂಶಗಳಿಗೆ ಸಂಸ್ಕೃತಿಯ ಅಧ್ಯಯನದಲ್ಲಿ ಮೊದಲಿಗೆ ಕ್ಷೇತ್ರಕಾರ್ಯ ಕೈಗೊಂಡು ನಂತರ ಕೇವಲ ಸಂಗ್ರಹಣೆ ಮತ್ತು ದಾಖಲಾಗಿಗಳಿಗೆ ಗಮನವನ್ನು ನೀಡುತ್ತಿದ್ದರು. ಈ ರೀತಿಯಿಂದಾಗಿ ಪ್ರಾಚೀನ ಜನರ ಜೀವನವನ್ನು ಅವರ ಸಂಪ್ರದಾಯ ಆಚರಣೆಗಳು, ಕಲೆಗಳು ಮುಂತಾದ ದೇಸಿ ಸಂಸ್ಕೃತಿಗೆ ಸಂಬಂಧಪಟ್ಟಂತೆ ನಾವು ಇಂದಿಗೂ ಹಾಗೂ ಮುಂದಕ್ಕೂ ತಿಳಿದುಕೊಳ್ಳಬಹುದಾಗಿದೆ. ಒಂದು ಪಕ್ಷದಲ್ಲಿ ಈ ರೀತಿಯ ಗಮನವನ್ನು ಜಾನಪದೀಯ ಕ್ಷೇತ್ರ ನೀಡದಿದ್ದ ಪಕ್ಷದಲ್ಲಿ ಆಧುನಿಕತೆಯ ಪ್ರಭಾವದಿಂದ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದ ಸಂಸ್ಕೃತಿಯು ನಶಿಸಿಹೋಗುತ್ತಿತ್ತು. ಆದ್ದರಿಂದ ಸಂಶೋಧನೆಯ ಅಕ್ಷಯ ಪಾತ್ರೆಯಾದ ಜಾನಪದೀಯ ಸಮುದಾಯದ ಸಂಸ್ಕೃತಿಯ ದಾಖಲೆ ಮತ್ತು ಮಾಹಿತಿಯ ಸಂಗ್ರಹಣೆಯು ಮೊದಲ ಹಂತದ ಸಂಶೋಧನೆಯ ಉದ್ದೇಶವಾಗಿದೆ.

ನಾಗರಿಕತೆಯ ಪ್ರಭಾವದಿಂದ ಇಂದು ಆಧುನಿಕ ಜಗತ್ತಿನಲ್ಲಿ ಸಮಾಜವು ಪರಿವರ್ತನೆಯನ್ನು ಕಾಣುತ್ತಿರುವುದನ್ನು ನಾವು ನೋಡಬಹುದಾಗಿದೆ. ಆಧುನಿಕ ಸಂಸ್ಕೃತಿಯಿಂದಾಗಿ ಜಾನಪದವು ಮೂಲೆಗುಂಪಾಗುತ್ತಿದೆ. ಜೊತೆಗೆ ಅದು ತನ್ನ

ಮೂಲರೂಪವನ್ನು ಪಡೆದುಕೊಂಡಿರುವುದನ್ನು ನಾವು ಗಮನಿಸಬಹುದು. ಆದ್ದರಿಂದ ಜಾನಪದ ಅಂಶಗಳು ಕಣ್ಮರೆಯಾಗುವ ಮೊದಲು ಅದರ ಸಾಂಸ್ಕೃತಿಕ ಮಹತ್ವ ಇರುವ ಸಂದರ್ಭದಲ್ಲೆ ಅವುಗಳನ್ನು ಸಂಗ್ರಹಿಸಿ, ದಾಖಲಿಸಿ ಪ್ರಕಟಿಸುವುದರಲ್ಲಿ ಔಚಿತ್ಯವಿದೆ ಎಂದು ಹೇಳಬಹುದಾಗಿದೆ. ಎಲ್ಲಕ್ಕಿಂತ ನಾವು ಗ್ರಾಮೀಣ ಸಮುದಾಯದ ಸಂಸ್ಕೃತಿಯನ್ನು ಅವಲೋಕಿಸಿದಾಗ ನಮಗೆ ಗೋಚರಿಸುವ ಅವರ ಮುಗ್ಧತೆ ಎಂದರೆ ಜಾತ್ಯಾತೀತ ರಾಷ್ಟ್ರವಾದ ನಮ್ಮ ದೇಶದಲ್ಲಿ ಜಾತಿ ವ್ಯವಸ್ಥೆ ಇದ್ದರೂ ಸಹ ತಾವು ಆಚರಿಸುವ ಜಾತ್ರೆಗಳಲ್ಲಿ, ಊರ ಹಬ್ಬಗಳಲ್ಲಿ, ಆಚರಣೆ ಸಂಪ್ರದಾಯಗಳಲ್ಲಿ ಅವರು ಜಾತಿ ಭೇದವನ್ನು ಮರೆತು ಆಚರಿಸಿ ಸಹಬಾಳ್ವೆಯಿಂದ ಜೀವನ ನಡೆಸುವುದನ್ನು ನಾವು ಗಮನಿಸಬಹುದು. ಮೌಖಿಕ ಸಾಹಿತ್ಯ ಮತ್ತು ಲಿಖಿತ ಸಾಹಿತ್ಯವನ್ನು ಸಂಗ್ರಹಿಸದಿದ್ದರೆ ಅವುಗಳು ನಶಿಸುವ ಸಂದರ್ಭಗಳುಂಟು. ಆದ್ದರಿಂದ ಅವು ಪ್ರಚಲಿತದಲ್ಲಿರುವಂತೆ ಅವುಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸುವುದು ಈ ಅಧ್ಯಯನದ ಉದ್ದೇಶದಲ್ಲೊಂದಾಗಿದೆ. ಕ್ಷೇತ್ರಕಾರ್ಯದ ಮೂಲಕ ಒಂದು ಜಾನಪದ ಕ್ಷೇತ್ರದಲ್ಲಿ ಜೀವನ, ಆಚಾರ, ವಿಚಾರ, ಸಂಪ್ರದಾಯ, ನಂಬಿಕೆ, ರೀತಿ–ನೀತಿಗಳು, ಆಚರಣೆಗಳನ್ನು, ಸಂಪ್ರದಾಯಗಳನ್ನು ಅರ್ಥಮಾಡಿಕೊಳ್ಳುವುದರ ಜೊತೆಗೆ ಅವರ ಸಾಮಾಜಿಕ ಜೀವನ ಮನರಂಜನೆಗಾಗಿ ಅವರು ಹಾಡುವ ಜನಪದ ಗೀತೆಗಳು, ಜನಪದ ಗಾದೆಗಳು, ಜನಪದ ಒಗಟುಗಳು, ಜನಪದ ಕಥೆಗಳು, ರೋಮಾಂಚನ ಸಂತಸವನ್ನು ನೀಡುತ್ತವೆ. ಸಮಾಜದ ಸಂಸ್ಕೃತಿಯನ್ನು ಅದರ ಅನನ್ಯತೆಯನ್ನು ಮತ್ತು ಬದಲಾಗುತ್ತಿರುವ ಪರಿಸರಕ್ಕೆ ಅವು ಹೇಗೆ ಸ್ಪಂದಿಸುತ್ತವೆ ಎಂಬುದನ್ನು ತಿಳಿಸಿ ಕೊಡುತ್ತವೆ. ಸಂಶೋಧನೆಯನ್ನು ಕೃತಿಯ ಮೂಲಕ ಅಥವಾ ಪ್ರಯೋಗಾಲಯದಲ್ಲಿ ಕುಳಿತು ಮುಗಿಸಲು ಸಾಧ್ಯವಿಲ್ಲ ಬೆಳಕಿಲ್ಲದ ರಾತ್ರಿಯಲ್ಲಿ ಪ್ರಯಾಣ ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಕ್ಷೇತ್ರ ಕಾರ್ಯವಿಲ್ಲದ ಸಂಶೋಧನೆ ಪರಿಪಕ್ವವಾಗುವುದಿಲ್ಲ ಎನ್ನಬಹುದು.

ಇದರ ವ್ಯಾಪ್ತಿ, ವಿಶಾಲವೂ, ವಿಸ್ತಾರವೂ ಆದ ಕಡಲಂತೆ, ನಿಸರ್ಗದಂತೆ, ಬಹುವಿಸ್ತಾರವಾಗಿದೆ. ಆದ್ದರಿಂದ ಎಷ್ಟೋ ಅಧ್ಯಯನ ಮಾಡಿದರೂ ಕ್ಷೇತ್ರಕಾರ್ಯ ಮುಗಿಯುವುದಿಲ್ಲ. ಪ್ರಸ್ತುತ ನಿಬಂಧದಲ್ಲಿ "ಕ್ಯಾತನಹಳ್ಳಿಯ ಸಾಂಸ್ಕೃತಿಕ ಅಧ್ಯಯನ"ವನ್ನು ಕೈಗೊಳ್ಳಲಾಗಿದೆ. ಈ ಸಂಶೋಧನೆಯ ಉದ್ದೇಶ ನಿತ್ಯ ಪರಿವರ್ತನಶೀಲವಾದ ಜಾನಪದ ಕ್ಷೇತ್ರಗಳಲ್ಲಿ ಅದರ ಮೂಲ ನೆಲೆಯನ್ನು ಮತ್ತು ಜನಪದರ ಆಶಯಗಳನ್ನು, ಆಚಾರ ವಿಚಾರಗಳನ್ನು, ಸಂಪ್ರದಾಯಗಳನ್ನು ಈ ಕ್ಷೇತ್ರದ ಜನರ ಆರ್ಥಿಕ ಜೀವನ, ಸಾಮಾಜಿಕ ಜೀವನ, ಭಾಷೆಗಳ ಬಗೆಗೆ ತಿಳಿಸುವುದಾಗಿದೆ. ಜೊತೆಗೆ ಕ್ಷೇತ್ರದ ಜನರು ಆಚರಿಸುವ ಆಚರಣೆಗಳು, ಹಬ್ಬ ಹರಿದಿನಗಳು ಗ್ರಾಮದೇವರ

ಹಬ್ಬಗಳು, ಅವುಗಳ ಮಹತ್ವ, ಉದ್ದೇಶ ಇವುಗಳ ಹಿಂದಿನ ಜನಪದರ ನಂಬಿಕೆಗಳು ಹುಟ್ಟಿಕೊಂಡ ಬಗ್ಗೆ, ಹರಕೆಗಳ ಪರಿಚಯ, ವೈಶಿಷ್ಟತೆಗಳನ್ನು ತಿಳಿದುಕೊಳ್ಳುವುದಾಗಿದೆ. ಜನಪದ ನಂಬಿಕೆಗಳಲ್ಲಿ ಕ್ಯಾತನಹಳ್ಳಿಯ ದೇವರುಗಳ ಬಗೆಗೆ ಆರಾಧನೆಗಳ ಬಗೆಗೆ ಸ್ಥೂಲವಾಗಿ ತಿಳಿಸಲಾಗಿದೆ. ಕ್ಯಾತನಹಳ್ಳಿ ಹಾಗೂ ಸುತ್ತಮುತ್ತಲ ಜನರ ಜೊತೆಯಲ್ಲಿ ಸಂಭಾಷಣೆಯನ್ನು ನಡೆಸಿ ಅಲ್ಲಿನ ಎಲ್ಲಾ ಸಾಂಸ್ಕೃತಿಕ ಪರಂಪರೆಯನ್ನು ತಿಳಿದುಕೊಳ್ಳಲಾಗಿದೆ. ಈ ನಿಬಂಧದಲ್ಲಿ ಎಲ್ಲಾ ರೀತಿಯ ಕ್ಷೇತ್ರಕಾರ್ಯದ ವಿಷಯಗಳನ್ನು ಮತ್ತು ಅದರ ಎಲ್ಲಾ ಜಾನಪದೀಯ ದೃಷ್ಟಿಯಿಂದ ಅಧ್ಯಯನವನ್ನು ಕೈಗೊಂಡಿದ್ದೇನೆ. ಈ ನಿಬಂಧದಲ್ಲಿ ಅಧ್ಯಯನ ಮಾಡಿದ ವಿಷಯದ ಬಗ್ಗೆ ಹೆಚ್ಚಿನ ಆಧಾರವನ್ನು ಕಲ್ಪಿಸುವ ಸಲುವಾಗಿ ಭಾವಚಿತ್ರವನ್ನೂ ಹಾಗೂ ಕ್ಯಾತನಹಳ್ಳಿಯ ನೀಲನಕ್ಷೆಯನ್ನು ಸಹ ಸೇರಿಸಲಾಗಿದೆ.

ಒಟ್ಟಾರೆಯಾಗಿ ಕ್ಯಾತನಹಳ್ಳಿ ಕ್ಷೇತ್ರದ ಸಾಂಸ್ಕೃತಿಕ ಅಧ್ಯಯನದ ಜೊತೆಗೆ ಬುಡಕಟ್ಟು ಸಂಸ್ಕೃತಿಯ ಭಾರ್ಷಿಕ ಅಧ್ಯಯನವನ್ನು ಕೈಗೊಂಡಿರುತ್ತೇನೆ. ಏಕೆಂದರೆ ಅಲ್ಲಿನ ಜನರ ಜೀವನ ವಿಧಾನ, ಅವರ ಭಾಷೆ, ಆಧುನಿಕತೆಗೆ ಅವರ ಪರಿವರ್ತನೆಯ ಬಗೆಗೆ ಅಲ್ಲಿನ ಆಚಾರ–ವಿಚಾರ, ಉದ್ಯೋಗ, ನಂಬಿಕೆಗಳು ಇತ್ಯಾದಿ ವಿಷಯಗಳ ಬಗ್ಗೆಯೂ ಅವರುಗಳ ಜೊತೆ ಚರ್ಚಿಸಿ ವಿಶ್ಲೇಷಿಸಿರುತ್ತೇನೆ. ಈ ರೀತಿಯ ಸಂಶೋಧನೆಯನ್ನು ಕೈಗೊಳ್ಳಬೇಕಾದರೆ ತಾಳ್ಮೆ, ವಿಧೇಯತೆ, ವಿನಯ, ಶಾಂತಿ, ಇವುಗಳ ಜೊತೆಗೆ ವಿಷಯವನ್ನು ಸಂಗ್ರಹಿಸುವಲ್ಲಿ ಪ್ರಾಮಾಣಿಕ ಪ್ರಯತ್ನವನ್ನು ಮೈಗೂಡಿಸಿಕೊಳ್ಳಬೇಕಾಗುತ್ತದೆ. ಈ ನಿಬಂಧದಲ್ಲಿ ಕ್ಯಾತನಹಳ್ಳಿಯ ಸಮಸ್ತ ವಿಚಾರಗಳನ್ನು ಜನಪದರ ಸಂಸ್ಕೃತಿಯ ಯಥಾವತ್ತಾದ ಚಿತ್ರಣವನ್ನು ಸಂಗ್ರಹವಾಗಿ ಅಲ್ಲದಿದ್ದರೂ ಸಂಕ್ಷಿಪ್ತವಾಗಿ ಆಂಶಿಕವಾಗಿ ಹಿಡಿದಿಡಲು ಪ್ರಯತ್ನ ಮಾಡಿರುತ್ತೇನೆ. ಈ ನಿಬಂಧವು ಒಂದು ಹಳ್ಳಿಯ ಬಗೆಗೆ, ಗ್ರಾಮೀಣ ಸೊಗಡಿನ ಬಗೆಗೆ ತಿಳಿದುಕೊಳ್ಳಲು ಒಂದು ಅನುಕೂಲಕರವಾದ ದಾಖಲಾತಿಯಾಗುತ್ತದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲವೆಂದುಕೊಂಡಿರುತ್ತೇನೆ. ಜೊತೆಗೆ ದೇಸೀಯತೆ, ಜಾನಪದ ಸಾಹಿತ್ಯ ಒಂದು ಸಾಗರ ಎಂದುಕೊಂಡರೆ, ಅದರಿಂದ ಬೊಗಸೆ ನೀರಿನಷ್ಟಾದರೂ ಹಿಡಿದಿಡಬೇಕೆಂದು ಪ್ರಾಮಾಣಿಕವಾಗಿ ಪ್ರಯತ್ನಿಸಿರುತ್ತೇನೆ.

**ಸಂಸ್ಕೃತಿ, ವ್ಯಾಖ್ಯಾನಗಳು ಮತ್ತು ಜನಪದ ಸಂಸ್ಕೃತಿ**

"ಸಂಸ್ಕೃತಿ" ಎಂಬುದು ನಮ್ಮ ಧರ್ಮದ ಅಥವಾ ದೇಶದ ಒಂದು ಸಾಂಕೇತಿಕ ಗುರುತು. ಅದು ಪವಿತ್ರವೂ ಪ್ರಾಚೀನವೂ ಆದುದು, ಹಿರೀಕರಿಂದ ಬಂದಿದ್ದು,

ನಾವದನ್ನು ಆಧರಿಸಬೇಕು, ಅನುಸರಿಸಬೇಕು ಮಾತ್ರವಲ್ಲ ಅದನ್ನು ಅನ್ಯರ ಆಕ್ರಮಣಗಳಿಂದ ರಕ್ಷಿಸಬೇಕು. ಇತ್ಯಾದಿ ಅಂಶಗಳು 'ಸಂಸ್ಕೃತಿ' ಎಂಬ ಪದದ ಪ್ರಾಥಮಿಕ ಹಂತದ ಅರ್ಥವಾಗಿ ಗ್ರಹಿಸಬಹುದು. ಆದರೆ ಇವು ಸಂಸ್ಕೃತಿಗಿರುವ ಅನೇಕ ಅರ್ಥಗಳಲ್ಲಿ ಒಂದನ್ನು ಮಾತ್ರ ಪ್ರತಿನಿಧಿಸುತ್ತವೆ. ಸಂಸ್ಕೃತಿ ಎಂಬುದು ಮೂಲತಃ ಒಂದು ರಚನೆ. ಬೌದ್ಧಿಕವಾಗಿ ರೂಪಿಸಿಕೊಂಡ ಒಂದು ಪರಿಕಲ್ಪನೆಯಾಗಿದೆ. ಈ ಶಬ್ದ ವ್ಯಾಪಕವಾಗಿ ಬಳಕೆಗೆ ಬಂದದ್ದು ೨೦ನೇ ಶತಮಾನದಲ್ಲಿ. ಈ ಬಳಕೆಗೆ ಹೆಚ್ಚೆಂದರೆ ಎರಡು ಶತಮಾನದ ಇತಿಹಾಸವಿದೆ. ಕನ್ನಡದಲ್ಲಿ ಸುಮಾರು ೮೦ ವರ್ಷಗಳ ಇತಿಹಾಸವಿದೆ.

ಸಂಸ್ಕೃತಿ ಎಂಬ ಶಬ್ದವು ಇಂಗ್ಲಿಷಿನ 'ಕಲ್ಚರ್' (Culture) ಎಂಬುದಕ್ಕೆ ಪರ್ಯಾಯವಾಗಿ ರೂಪುಗೊಂಡ ಪದ. ಪಾಶ್ಚಾತ್ಯರಲ್ಲಿ 'ಪೈರಿನ ಬೆಳವಿಕೆ' ಅಥವಾ ಕೀಟ ಸಾಕಾನೆ', ನೈತಿಕ ಆದರ್ಶಗಳು', 'ಸಾಹಿತ್ಯ ಚಿತ್ರ, ಸಂಗೀತಾದಿ ಕಲೆಗಳ ಲೋಕ', 'ನಿರ್ದಿಷ್ಟ ಸಮುದಾಯ ವಿಶಿಷ್ಟ ಜೀವನ ವಿವರಗಳು', 'ಅಧ್ಯಯನದಲ್ಲಿ ಬಹುಶಿಸ್ತಿನ ಪರಿಶೀಲನೆ' ಎಂಬ ಐದು ಹಂತಗಳಲ್ಲಿ ಇದು ಅರ್ಥ ಪಡೆದುಕೊಂಡು ಬಂದಂತೆ ಕಾಣುತ್ತದೆ. ಭಾರತದಲ್ಲಿ 'ಸಂಸ್ಕೃತಿ' ಎಂಬ ಶಬ್ದವು 'ಬೆಳವಿಕೆ' ಎನ್ನುವ ಅರ್ಥದ ಘಟ್ಟವನ್ನು ಕಾಣಲೇ ಇಲ್ಲ. 'ಡಿವಿಜಿ' ಅವರ ಪ್ರಕಾರ 'ಸಂಸ್ಕೃತಿ' ಎಂದರೆ ಬೆಳವಿಕೆಯ ಕ್ರಿಯೆಯೇ ಅಲ್ಲ. ಬೆಳವಿಕೆಯು ಪ್ರಕೃತಿ ಸಂಸ್ಕೃತಿಯೆಂಬುದು ಪ್ರಕೃತಿಯಿಂದ ಸಂಸ್ಮರಣಗೊಂಡ ಸಾರ. ಕನ್ನಡದಲ್ಲಿ ಸಂಸ್ಕೃತಿ ಶಬ್ದದ ಬಳಕೆ ಶುರುವಾಗುವುದೇ 'ಪರಿಷ್ಕರಣ' ನೈತಿಕ ಆದರ್ಶವಾದಿ ಅರ್ಥದ ಘಟ್ಟದಿಂದ.

'ಸಂಸ್ಕೃತಿ' ಎಂದರೆ ಅನೇಕ ಅರ್ಥಗಳಿಂದ ತಿಳಿದುಕೊಳ್ಳಬಹುದಾಗಿದೆ.

೧. ಸಂಸ್ಕೃತಿ ಎಂಬುದು ಒಂದು ಸಮುದಾಯದ ಬದುಕುವ, ಆಲೋಚಿಸುವ ಸಮಸ್ತ ಆಯಾಮಗಳನ್ನು ಒಳಗೊಳ್ಳುವ ಒಂದು ಪರಿಭಾಷೆ.

೨. ಸಮುದಾಯ ಎಂದಾಗ ಒಂದು ಗುಂಪಲ್ಲ, ಹಲವಾರು ಗುಂಪುಗಳಿರುತ್ತವೆ. ಈ ಎಲ್ಲಾ ಗುಂಪುಗಳ ನಂಬಿಕೆ ಆಚರಣೆಗಳೂ ಒಟ್ಟು ಸೇರಿಯೇ ಅದರ ಸಂಸ್ಕೃತಿ.

೩. ಒಂದು ನಾಡಿಗೆ ಏಕರೂಪಿ ಸಂಸ್ಕೃತಿ ಇರುವುದಿಲ್ಲ. ಅದರೊಳಗೆ ಪ್ರಾದೇಶಿಕ, ಜಾತೀಯ, ಧಾರ್ಮಿಕ, ಬುಡಕಟ್ಟಿನ ರೂಪಗಳಿರುತ್ತವೆ.

ಭಾರತದಂತಹ ದೇಶದಲ್ಲಿ ಇದು ಸಹಜ. ಇದನ್ನು ಸಂಸ್ಕೃತಿಯ ಬಹುರೂಪಿಗುಣ ಎನ್ನಬಹುದು.

೪. ಸಂಸ್ಕೃತಿ ಎಂಬುದು ಹಿಂದೆ ಹಿರೀಕರು ಕಟ್ಟಿಟ್ಟ ಬುತ್ತಿಯಲ್ಲ. ಅದು ಉದ್ದಕ್ಕೂ ಬದಲಾಗುತ್ತಾ ಬಂದಿದ್ದು, ನಮ್ಮ ಕಾಲದಲ್ಲಿ ಒಂದು ರೂಪದಲ್ಲಿ ಅಸ್ತಿತ್ವದಲ್ಲಿದೆ. ನಮ್ಮ ಬದುಕಿನಂತೆ ಸಮಾಜದಂತೆ ಇದೂ ಕೂಡ ಚಲನಶೀಲ. ಇದನ್ನು ಕೆಡದಂತೆ ರಕ್ಷಿಸಿಕೊಂಡು ಬರುವುದು ಸಾಧ್ಯವಿಲ್ಲ. ಇದಕ್ಕೂ ಪ್ರತಿ ತಲೆಮಾರು ಕೂಡ ತನ್ನದನ್ನು ಕೂಡಿಸಿ ರೂಪಾಂತರ ಮಾಡುತ್ತ ಹೋಗುತ್ತದೆ.

೫. ಸಂಸ್ಕೃತಿಯಲ್ಲಿ ತರತಮ ಎಂಬುದಿಲ್ಲ. ನೈತಿಕವಾಗಿ ಕೆಟ್ಟ-ಒಳ್ಳೆಯ ವಿಕಾಸದ ದೃಷ್ಟಿಯಿಂದ ಹಿಂದುಳಿದ ಮುಂದುವರೆದ ಶ್ರೇಣೀಕರಣದ ನೆಲೆಯಿಂದ ಮೇಲು-ಕೀಳು ಎಂಬ ಪರಿಭಾಷೆಯಲ್ಲಿ ಇದನ್ನು ಅಳೆಯಲು ಸಾಧ್ಯವಿಲ್ಲ. ಸಮುದಾಯಗಳ ಎಲ್ಲ ಬಗೆಯ ನಂಬಿಕೆ, ಆಚರಣೆಗಳನ್ನು ಸಂಸ್ಕೃತಿ ಎಂದು ಒಪ್ಪಿಕೊಳ್ಳಬೇಕು.

'ಸಂಸ್ಕೃತಿ'ಯ ಬಗೆಗೆ ಹಲವಾರು ವಿದ್ವಾಂಸರ ವ್ಯಾಖ್ಯಾನಗಳು ಮೂಡಿ-ಬಂದಿರುವುದನ್ನು ನಾವು ಗಮನಿಸಬಹುದು.

೧. ಡಿ.ವಿ.ಗುಂಡಪ್ಪನವರು ವ್ಯಾಖ್ಯಾನಿಸಿರುವಂತೆ 'ಸಂಸ್ಕಾರದಿಂದ ಸಂಸ್ಕೃತಿ', 'ಸಂಸ್ಕಾರ/ಸಂಸ್ಕರಣ' ಎಂದರೆ 'ಸಮ್ಯಕ್‌ಕರಣ' ಸಮ್ಯಕ್ ಕೃತಿ ಸಂಸ್ಕೃತಿ. ಹಾಗೆಂದರೆ ಚೆನ್ನಾಗುವಂತೆ ಮಾಡುವುದು, ಒಳ್ಳೆಯದನ್ನಾಗಿಸುವುದು, ಶುದ್ಧಿಮಾಡಿ ಉತ್ತಮಪಡಿಸುವುದು ಎಂದರ್ಥ. ನಮ್ಮ ಜೀವನವನ್ನು ಸಾಧುವನ್ನಾಗಿ ಮಾಡಿಕೊಳ್ಳುವ ವಿಧಾನವೇ ಸಂಸ್ಕೃತಿ.

೨. ಎಡ್ವರ್ಡ್ ಬರ್ನೆಟ್ ಟೈಲರ್ ಇಂಗ್ಲೆಂಡಿನ ಆಕ್ಸ್‌ಫರ್ಡ್ ವಿಶ್ವವಿದ್ಯಾ-ನಿಲಯದಲ್ಲಿ ಮಾನವಶಾಸ್ತ್ರದ ಪ್ರಾಧ್ಯಾಪರಾಗಿದ್ದರು ಇವರೂ ಸಂಸ್ಕೃತಿಯ ಬಗೆಗೆ ತಮ್ಮ "ಪ್ರಾಚೀನ ಸಂಸ್ಕೃತಿ" (Primitive Culture) ಎಂಬ ಪ್ರಸಿದ್ಧ ಕೃತಿಯಲ್ಲಿ ಸಂಸ್ಕೃತಿಯನ್ನು ಈ ರೀತಿ ವ್ಯಾಖ್ಯಾನಿಸಿದ್ದಾರೆ.

"ಸಂಸ್ಕೃತಿಯನ್ನು ಒಂದು ಜನತೆಯ ಬದುಕಿನ ಹಿನ್ನೆಲೆಯಲ್ಲಿ ಸಮಗ್ರವಾಗಿ ಪರಿಭಾವಿಸಿದಾಗ ಜ್ಞಾನ, ನಂಬಿಕೆ, ಕಲೆ, ನೀತಿ, ಕಾನೂನು, ಸಂಪ್ರದಾಯಗಳು ಹಾಗೂ ಮನುಷ್ಯ ತನ್ನ ಸಮಾಜದ ಸದಸ್ಯನಾಗಿ ಗಳಿಸಬಹುದಾದ ಬೇರೆ ಯಾವುದೇ ಅರ್ಹತೆಗಳ ಮತ್ತು ಅಭ್ಯಾಸಗಳ ಸಂಕೀರ್ಣ ಮೊತ್ತ" ಎಂದಾಗುತ್ತದೆ. ಕಲಿತ ಎಲ್ಲ

ಒಳ್ಳೆಯ ಹಾಗೂ ಕೆಟ್ಟ ನಡೆನುಡಿ ಕಲೆ, ಕಾನೂನು, ಬೇಸಾಯ, ಬಹುಮಾನ, ಅವಮಾನ ಪ್ರಸಂಗಗಳು – ಇವೆಲ್ಲವನ್ನೂ ಒಡಮೂಡಿಸಿಕೊಂಡ ಒಟ್ಟು ಜೀವನ ಕ್ರಮವೇ 'ಸಂಸ್ಕೃತಿ'. 'ಮನುಷ್ಯ ಮತ್ತು ಸಂಸ್ಕೃತಿ' ಇವು ಅವಿಭಾಜ್ಯ ಅಂಶಗಳು. ಒಂದಿರದೆ ಮತ್ತೊಂದಿರಲು ಸಾಧ್ಯವೇ ಇಲ್ಲ ಎನ್ನಬಹುದು.

ಅ) ಮ್ಯಾಥ್ಯೂ ಆರ್ನಾಲ್ಡ್ ಎಂಬ ಇಂಗ್ಲೆಂಡಿನ ಮತ್ತೊಬ್ಬ ಪ್ರಾಧ್ಯಾಪಕರು "ಸಂಸ್ಕೃತಿ ಮತ್ತು ಅನಾಯಕತೆ" (Culture and Anarchy ಎಂಬ ಕೃತಿಯಲ್ಲಿ ಸಂಸ್ಕೃತಿಯ ಬಗೆಗೆ ವಿಶ್ಲೇಷಿಸಿದ್ದಾರೆ. "ಮನುಷ್ಯನ ಸರ್ವಾಂಗೀಣ ಪ್ರಗತಿಗೆ ಪ್ರತಿಯೊಬ್ಬ ಮನುಷ್ಯನ ಅಂತರಂಗ ವಿಕಾಸವೂ ಅವಶ್ಯ. ನಮ್ಮ ಬದುಕಿಗೆ ಮಾಧುರ್ಯ ಮತ್ತು ಕಾಂತಿಗಳನ್ನು ತುಂಬಿಕೊಂಡರೆ ಮಾತ್ರ ಸುಸಂಸ್ಕೃತ ಜೀವನ ಸಾಧ್ಯ. ಇಲ್ಲದಿದ್ದರೆ ಯಾವ ಪ್ರಗತಿಯಾದರೂ ಪ್ರಯೋಜನವಿಲ್ಲ" ಎಂದು ಅಭಿಪ್ರಾಯಪಡುತ್ತಾರೆ.

ಆ) ಟಿ.ಎಸ್.ಎಲಿಯಟ್ – ಇವರು ಸಮಾಜ ವಿಜ್ಞಾನಿಗಳ ಹಾಗೂ ಮಾನವಾದರ್ಶವಾದಿಗಳ ಸಂಸ್ಕೃತಿ ಕಲ್ಪನೆಯ ನಡುವಣ ಕಂದಕವನ್ನು ಜೋಡಿಸುವ ಸಮನ್ವಯದ ಯತ್ನಮಾಡಿದ್ದಾರೆ. ಸಂಸ್ಕೃತಿಯ ಬಗೆಗೆ ನಾನಾರ್ಥಗಳನ್ನು ಎಲಿಯಟ್ ಪರಿಶೀಲಿಸಿರುವುದು ಕಂಡುಬರುತ್ತದೆ.

೧) ವ್ಯಕ್ತಿಯು ತನ್ನನ್ನು ಜನಸಾಮಾನ್ಯರ ಮಟ್ಟದಿಂದ ಶಿಷ್ಟ ಜನರ ಮಟ್ಟಕ್ಕೆ ತಾನೇ ಏರಿಸಿಕೊಳ್ಳುವ ಪ್ರಯತ್ನ ಸಂಸ್ಕೃತಿ ಎನಿಸಿಕೊಳ್ಳುತ್ತದೆ.

೨) ಒಬ್ಬ ವ್ಯಕ್ತಿಯ ಸದಸ್ಯನಾಗಿರುವಂತಹ ಒಂದು ಸಮಾಜದ ನಿರ್ದಿಷ್ಟ ಜನಸಮುದಾಯದ ನಂಬಿಕೆ, ಆಲೋಚನೆ ಹಾಗೂ ಅನುಭವಗಳು ಆತನ ಸಂಸ್ಕೃತಿ ಸೂಚಕಾಂಶಗಳೂ ಆಗಿರುತ್ತವೆ.

೩) ಒಂದು ಸಮಷ್ಟಿ ಸಮಾಜದ ಅತ್ಯಂತ ಕನಿಷ್ಠ ಪ್ರಜ್ಞಾಪೂರ್ವಕ ಜೀವನ ಕ್ರಮವೇ 'ಸಂಸ್ಕೃತಿ'.

೪) ಸಂಸ್ಕೃತಿಯು ಒಂದು ಜನತೆಯ ಸಮಸ್ತ ವಿಶಿಷ್ಟ ಕ್ರಿಯೆಗಳನ್ನೂ ಆಸಕ್ತಿಗಳನ್ನೂ ಒಳಗೊಳ್ಳುತ್ತದೆ ಎಂಬಿತ್ಯಾದಿ ವ್ಯಾಖ್ಯಾನಗಳನ್ನು ಎಲಿಯಟ್ ಸಂಸ್ಕೃತಿಯ ಬಗೆಗೆ ಹೇಳುತ್ತಾನೆ.

ಇವರುಗಳಷ್ಟೇ ಅಲ್ಲದೆ ಹಲವಾರು ವಿದ್ವಾಂಸರು, ಲೇಖಕರು, ವಿಮರ್ಶಕರು ಹಲವಾರು ಕ್ಷೇತ್ರದ ಮಹಾನ್ ವ್ಯಕ್ತಿಗಳೂ ಕೂಡ ಸಂಸ್ಕೃತಿಯ ಬಗೆಗೆ ಹೇಳುತ್ತಲೇ ಇದ್ದಾರೆ. ಸಂಸ್ಕೃತಿ ಎನ್ನುವುದು ತನ್ನೊಡಲಿನಲ್ಲಿ ಆಳ-ಅಗಲಗಳಿಂದ ಕೂಡಿದ ವಿಶಾಲ ಸಾಗರದಷ್ಟು ವಿಷಯಗಳನ್ನು ಒಳಗೊಂಡಿರುವುದು ಸತ್ಯ. ಒಂದು ಭಾಷೆಯಾಗಲೀ, ಒಂದು ಧರ್ಮವಾಗಲೀ, ಒಂದು ದೇಶವಾಗಲೀ ಅದು ತನ್ನತನವನ್ನು, ತನ್ನ ದೇಸೀಯತೆಯನ್ನು ಬಿಟ್ಟು ಮುಂದೆ ಹೋಗದಿರುವುದೂ ಕೂಡ ಅದು ಸಂಸ್ಕೃತಿಯ ಇನ್ನೊಂದು ಮುಖವೇ ಆಗಿರುವಂತಹದ್ದು.

ಸಂಸ್ಕೃತಿಯಲ್ಲಿ ನಾವು ಅನೇಕ ಕವಲುಗಳನ್ನು ಗಮನಿಸಬಹುದಾಗಿದೆ. ಮುಖ್ಯವಾದವುಗಳಾಗಿ 'ಜನಪದ ಸಂಸ್ಕೃತಿ, ನಂಬಿಕೆಗಳು, ಆಚರಣೆಗಳು, ಸಂಪ್ರದಾಯಗಳು, ಆರಾಧನೆಗಳು ಹೀಗೆ ಹಲವಾರು ವಿಷಯಗಳನ್ನು ಒಳಗೊಂಡಿರುವ ಒಂದು ಪ್ರಜ್ಞಾಪೂರ್ವಕ ಕ್ರಮವಾಗಿದೆ.

**ಜನಪದ ಸಂಸ್ಕೃತಿ**

ಜಾನಪದರ (Folk) ಮೊತ್ತ ಜೀವನಕ್ರಮವೇ 'ಜನಪದ ಸಂಸ್ಕೃತಿ', "ಗ್ರಾಮೀಣ ಸಮಾಜಗಳಲ್ಲಿದ್ದು ಭೂಮಿಯೊಂದಿಗೆ ಭಾವನಾತ್ಮಕ ಬಾಂಧವ್ಯವನ್ನು ಬೆಸೆದುಕೊಂಡು ಬೇಸಾಯದಿಂದ ಬದುಕುವ ರೈತಾಪಿ ಜನ ಹಾಗೂ ಜನಸಾಮಾನ್ಯರು. ಜನಸಾಮಾನ್ಯರು ಜನಪದ ಸಮಾಜಗಳಲ್ಲಿ ಮಾತ್ರವಲ್ಲದೆ ಪಟ್ಟಣಗಳಲ್ಲಿಯೂ ಕಾನಸಿಗುತ್ತಾರೆ. ಆದರೂ ಅವರು ಕೇವಲ ನಾಗರಿಕರಾಗಿರದೆ, ಮೂಲಭೂತವಾದ ಕೆಲವು ಜಾನಪದೀಯ ಗುಣ ಸ್ವಭಾವಗಳನ್ನು ಮುಂದುವರಿಸಿಕೊಂಡು ಬಂದಿರುತ್ತಾರೆ. ಈ ಕಾರಣಕ್ಕಾಗಿ ಅವರೂ ಜಾನಪದರ ಗ್ರಾಮೀನ ಪ್ರದೇಶದಲ್ಲಿ ಬದುಕುವ ಬಡಗಿ, ಬೆಸ್ತ, ಕಮ್ಮಾರ, ಅಗಸ, ಅಕ್ಕಸಾಲೆ, ಹರಿಜನ ಇವರೆಲ್ಲರೂ ಜಾನಪದರೆನಿಸಿಕೊಳ್ಳುತ್ತಾರೆ. ಭಾರತ-ಚೀನಾದಂತಹ ಜಾನಪದೀಯ (Folkloristic) ದೇಶಗಳಲ್ಲಿ ನಾಗರಿಕ-ರಲ್ಲಿಯೂ ಅನೇಕಾನೇಕ ಜನಪದ ಸಂಪ್ರದಾಯ, ಆಚರಣೆಗಳು ರೂಢಿಯಲ್ಲಿರುತ್ತವೆ. ಆದರೂ ತಾತ್ವಿಕವಾಗಿ ಜನಪದ ಸಮಾಜ ಸಂಸ್ಕೃತಿಗಳಿಗೂ ನಾಗರಿಕತೆಗೂ ವ್ಯತ್ಯಾಸವಿದೆ.

ಜನಪದ ಸಂಸ್ಕೃತಿಯನ್ನು ಆದರ್ಶಪ್ರಾಯವಾದ ಒಂದು ಬಗೆಯ ಸಂಸ್ಕೃತಿ ಎಂದು ಸೂತ್ರೀಕರಿಸಬಹುದು. ಆ ಸಂಸ್ಕೃತಿವಂತರ ವರ್ಣನೆ ತುಂಬ ಸಾಂಪ್ರದಾಯಕವೂ ವ್ಯಕ್ತಿಗತವೂ ಪರಸ್ಪರ ರಕ್ತಸಂಬಂಧಯುಕ್ತವೂ ಆಗಿದ್ದು, ಅವರ ನಡಾವಳಿಗಳನ್ನು ಪಾರಂಪರಿಕವಾಗಿಯೂ ಪವಿತ್ರವಾದ ನಂಬಿಕೆ ನಡಾವಳಿಗಳ ಮುಖಾಂತರವೂ ನಿಯಂತ್ರಿಸಲಾಗುತ್ತದೆ. ಅಂಥದೊಂದು ಸಂಸ್ಕೃತಿ ಸ್ವಕೀಯ ಜಾತಿ,

ವರ್ಗ ಮತ್ತು ಸ್ಥಳೀಯ ಜನರಿಂದ ಕೂಡಿರುತ್ತದೆ. ಆ ಸಂಸ್ಕೃತಿ ತನ್ನಿಂದ ತಾನೆ 'ಪವಿತ್ರ'ವಾಗಿರುತ್ತದೆ ಮತ್ತು ಅದರ ನೈತಿಕ ವ್ಯವಸ್ಥೆ ಪರಮ ಪ್ರಧಾನವಾಗಿರುತ್ತದೆ. ಆ ಸಂಸ್ಕೃತಿ ವಾಕ್ಪರಂಪರೆಯನ್ನಾಧರಿಸುತ್ತದೆ. ಅದು ತೌಲನಿಕವಾಗಿ ಸ್ಥಿರವಾಗಿದ್ದು ಸ್ಥಳೀಯವಾಗಿ ವಿಕಾಸಗೊಳ್ಳುತ್ತದೆ. ಜನಪದ ಸಂಸ್ಕೃತಿ ಪ್ರಾಚೀನ ಜನತೆಯಲ್ಲಿ ವಿಶೇಷವಾಗಿ ಕಾಣಬಂದರೂ ಜಾನಪದರು ಹಾಗೂ ನಾಗರಿಕರಿಂದಾವೃತವಾದ ಸಮಾಜದಲ್ಲಿಯೂ ಕಂಡುಬರುತ್ತದೆ. "ಸಣ್ಣ ಪ್ರಮಾಣ, ಆಳ ಮತ್ತು ತೀವ್ರತೆಗಳು ಜನಪದ ಸಂಸ್ಕೃತಿಗಳ ಗುಣ ಲಕ್ಷಣಗಳು ಎಂದು 'ಕ್ರೋಬರ್' ಅಭಿಪ್ರಾಯಪಟ್ಟಿದ್ದಾರೆ.

ಜನಪದ ಸಮಾಜ ಮತ್ತು ಸಂಸ್ಕೃತಿಗಳು ವಿಶಾಲ ಸಮಾಜ ಮತ್ತು ಸಂಸ್ಕೃತಿಗಳಿಂದ ಪೂರ್ಣ ಸ್ವತಂತ್ರವಾದುದಲ್ಲ ಎಂಬುದನ್ನು ಮರೆಯಬಾರದು. ಅವು ತಮ್ಮ ಸುತ್ತಲಿನ ವಿಶಾಲ ನಾಗರಿಕ ಸಮಾಜದ ಒಂದು ರೂಪವಷ್ಟೇ. ಎಂತಲೇ ಕ್ರೋಬರ್ "ಜನಪದ ಸಂಸ್ಕೃತಿ ಆಂಶಿಕ ಸಂಸ್ಕೃತಿ" ಎಂದು ಕರೆದದ್ದು. ಜಾನಪದರ ಮೂಲಭೂತಗುಣಗಳಾದ ಭೂ ವ್ಯಾಮೋಹ, ಭೂಮಿ ತಾಯಿ ಎಂಬ ಭಕ್ತಿಭಾವ ನಾಗರಿಕರಿಗಿರುವುದಿಲ್ಲ. ಅವರದು ಸದಾ ಸುಖ ಸೌಲಭ್ಯದ ಲಾಭದ ಸ್ವ ಸಂರಕ್ಷಣೆಯ ಧೋರಣೆ. ಜಗತ್ತಿನಾದ್ಯಂತ ಜಾನಪದರನ್ನು ಕುರಿತಂತೆ ನಾಗರಿಕರಿಗಿರುವ ಧೋರಣೆ ಒಂದು ಬಗೆಯ ತಾತ್ಸಾರದ ತಿರಸ್ಕಾರಯುಕ್ತ ಲಘುಧೋರಣೆ ಪ್ರತಿಯಾಗಿ ಜಾನಪದರಾದರೂ ನಾಗರಿಕರನ್ನು ದೇವತೆಗಳೆಂದು ಭಾವಿಸಿ, ಅವರ ಎಲ್ಲ ಕೃತಿಗಳನ್ನು ಮೆಚ್ಚುವುದಿಲ್ಲ. ಪ್ರತಿ ಸಂದರ್ಭದಲ್ಲಿಯೂ ಅವರತ್ತಲೇ ನೋಡುವುದಿಲ್ಲ. ಉಡುಪು ತೊಡುಪು ಕೆಲವು ಶಿಷ್ಟಾಚಾರ, ವ್ಯವಹಾರ ವಿದ್ಯೆ ಬುದ್ಧಿ ಮುಂತಾದ ಕೆಲವು ವಿಷಯಗಳಲ್ಲಿ ನಾಗರಿಕರು ತಮಗಿಂತಲೂ ಮೇಲು ಎಂಬುದನ್ನು ಜಾನಪದರು ಬಲ್ಲವರದಾದರೂ ನೈತಿಕವಾಗಿ ದೈಹಿಕ ಶ್ರಮದಲ್ಲಿ ಮತ್ತು ತಾಳ್ಮೆಯಲ್ಲಿ, ಪ್ರಾಮಾಣಿಕತೆ-ಯಲ್ಲಿ ತಾವು ಅವರಿಗಿಂತ ಎಷ್ಟೋ ಮೇಲೆಂದು ತಿಳಿದಿರುತ್ತಾರೆ. ನಾಗರಿಕರು ಸೋಮಾರಿಗಳು ಸುಳ್ಳರು ಎಂದು ನಂಬಿರುತ್ತಾರೆ.

ಜಾನಪದವು ಕನ್ನಡನಾಡಿನ ಭವ್ಯ ಇತಿಹಾಸ, ಸಂಸ್ಕೃತಿ, ಧಾರ್ಮಿಕ ಆಚರಣೆಗಳು, ಜನರ ಭಾವನೆಗಳನ್ನು ಸಾರುವ ಅತ್ಯುತ್ತಮ ಮಾಧ್ಯಮವಾಗಿದೆ. ಅನಕ್ಷರಸ್ಥರಿಗೆ ಇದು ಅತ್ಯುತ್ತಮವಾದ ಸಂವಹನವಾಗಿದೆಯಾದರೂ ಜನಪದದಲ್ಲಿ ಮಾಹಿತಿ ಭಂಡಾರವೇ ಇರುವುದರಿಂದ ಅಕ್ಷರಸ್ಥರೂ ಜಾನಪದದ ಸೊಗಡನ್ನು ಸವಿಯಬೇಕಿದೆ.

ಜನಪದವು ಒಬ್ಬರಿಂದ ಒಬ್ಬರಿಗೆ ಮಾತಿನ ಮೂಲಕ, ನೆನಪಿನಲ್ಲಿಟ್ಟುಕೊಳ್ಳುವ ಮೂಲಕ, ಅನುಕರಣೆ ಮೂಲಕ ಉಳಿಯುವ ಮತ್ತು ಸಂಚಲನಗೊಳ್ಳುವ

ಮಾಧ್ಯಮವಾಗಿರುವುದರಿಂದ: ಅದು ಹುಟ್ಟಿ ಪ್ರಬುದ್ಧವಾಗಿ ಬೆಳೆದಿದ್ದ ಕಾಲದಲ್ಲಿ ದಾಖಲಿಸುವ ವಿಧಾನಗಳ ಕೊರತೆಯಿದ್ದುದ್ದರಿಂದಾಗಿ ಸಾಕಷ್ಟು ಸಂಖ್ಯೆಯಲ್ಲಿ ಕಣ್ಮರೆಯಾಗಿದೆ. ಮಾಹಿತಿ–ತಂತ್ರಜ್ಞಾನದ ಇಂದಿನ ದಿನಗಳಲ್ಲಿ ಜಾನಪದದ ಸಂಗ್ರಹಕಾರ್ಯ ಆಸಕ್ತಿಯಿಂದ ನಡೆಯಬೇಕಾಗಿದೆಯಲ್ಲದೇ, ದಾಖಲಿಸಿಡಬೇಕಾದ ಅನಿವಾರ್ಯತೆ ಇದೆ. ಇಂತಹ ಕಾರ್ಯವಾಗದೇ ಇದ್ದಲ್ಲಿ ಪೂರ್ವಜರೊಂದಿಗಿನ ನಮ್ಮ ಭಾವನಾತ್ಮಕ ಬೆಸುಗೆ ಕಡಿದುಹೋಗುತ್ತದೆ.

ಅಧ್ಯಯನದ ದೃಷ್ಟಿಯಿಂದ ಜಾನಪದವನ್ನು ನಾಲ್ಕು ವಿಧಗಳಲ್ಲಿ ಗುರುತಿಸಬಹುದಾಗುತ್ತದೆ.

**೧) ಮೌಖಿಕ ಜಾನಪದ:**

ಮಾತಿನ ಮೂಲಕ, ಅನುಕರಣೆಗಳ ಮೂಲಕ, ನೆನಪಿನ ಮೂಲಕ ಒಬ್ಬರಿಂದ ಒಬ್ಬರಿಗೆ, ತಲೆಮಾರಿನಿಂದ ತಲೆಮಾರಿಗೆ ಸಂಚಲಿತವಾಗುವ ಸಾಹಿತ್ಯ. ಇದನ್ನು ಸಾಮಾನ್ಯವಾಗಿ ಒಗಟು, ಗಾದೆ, ಕಥೆ, ಕಾವ್ಯ, ಗೀತೆಗಳ ರೂಪದಲ್ಲಿ ಕಾಣಬಹುದು.

ಗೀತ ಜನಪದವು ವೈವಿಧ್ಯಮಯವಾಗಿದ್ದು ಅವುಗಳಲ್ಲಿ ಹತ್ತಾರು ಪ್ರಕಾರಗಳನ್ನು ಗುರುತಿಸಬಹುದು.

ಉದಾ: ಬೀಸುವ ಪದಗಳು, ಮದುವೆ ಪದಗಳು, ಸೋಬಾನೆ ಪದಗಳು, ಗೀಗೀ ಪದಗಳು, ಲಾಲಿ ಪದಗಳು, ದೇವರ ಪದಗಳು, ಕಗ್ಗದ ಪದಗಳು, ಕೊಂತಿಯ ಪದಗಳು, ಭಾಗವಂತಿಕೆ ಪದಗಳು, ಶಿಶುಪ್ರಾಸಗಳು, ಹೊಸಿಗೆ ಪದಗಳು, ಕುಣಿತದ ಪದಗಳು, ಸಂಕ್ರಾಂತಿ ಪದಗಳು ಇನ್ನೂ ಮುಂತಾದವು.

ಲಾಲಿ ಪದದ ಒಂದು ತುಣುಕು:

ಆಡಿ ಬಾ ನನ್ನಯ್ಯ ಅಂಗಾಲ ತೊಳೆದೇನು
ತೆಂಗಿನಕಾಯಿ ತಿಳಿನೀರು ತಕ್ಕೊಂಡು
ನಿನ್ನ ಬಂಗಾರ ಪಾದ ತೊಳೆದೇನು

**೨) ಪ್ರದರ್ಶನ ಜಾನಪದ:**

ನಾಟಕಗಳು, ಗೊಂಬೆಯಾಟಗಳು, ಜಾನಪದ ನೃತ್ಯಗಳು, ದೊಂಬರಾಟಗಳು ಮುಂತಾದವು ಪ್ರದರ್ಶನ ಜಾನಪದಗಳಾಗಿದ್ದು, ಪ್ರಭಾವಿ ಮಾಧ್ಯಮಗಳಾಗಿವೆ. ಪ್ರಾದೇಶಿಕ ವೈಶಿಷ್ಟ್ಯಗಳೊಂದಿಗೆ ಕನ್ನಡ ರಂಗಭೂಮಿ ಪ್ರಾಚೀನ ಕಾಲದಿಂದಲೂ ತನ್ನ ಅಸ್ತಿತ್ವ ಉಳಿಸಿಕೊಂಡು, ಬೆಳೆಸಿಕೊಂಡು ಬಂದಿದೆ. ಇವುಗಳಲ್ಲಿ ಜನಪದ ಶೈಲಿಯ

ಕೆಲವು ಪ್ರಮುಖ ಪ್ರಕಾರಗಳೆಂದರೆ, ಯಕ್ಷಗಾನ ಬಯಲಾಟಗಳು, ಗೊಂಬೆಯಾಟಗಳು, ದೊಂಬಿದಾಸರ ನಾಟಕಗಳು, ಸಣ್ಣಾಟಗಳು ಮುಂತಾದವು.

**೩) ಸಂಪ್ರದಾಯಕ ಜಾನಪದ:**

ಸಂಪ್ರದಾಯಬದ್ಧವಾಗಿ ಆಚರಿಸಿಕೊಂಡು ಬರುತ್ತಿರುವ ಹಬ್ಬಹರಿದಿನಗಳು, ಆಚರಣೆಗಳು, ಅಡುಗೆ ಪದ್ಧತಿಗಳು, ನಾಟಿವೈದ್ಯ ಪದ್ಧತಿಗಳು ಮುಂತಾದವು ಸಾಂಪ್ರದಾಯಿಕ ಜಾನಪದಗಳಾಗಿವೆ. ಜಾನಪದ ನೃತ್ಯಗಳು ಬಹುತೇಕ ಧಾರ್ಮಿಕ ಸಂಪ್ರದಾಯದ ಆಚರಣೆಯ ಭಾಗಗಳಾಗಿವೆ. ಇವುಗಳಿಗೆ ಪ್ರದೇಶದಿಂದ ಪ್ರದೇಶಕ್ಕೆ ಬೇರೆ ಬೇರೆ ರೂಪಗಳಿವೆ.

**ಉದಾ:** ಗೊರವರ ಕುಣಿತ, ಸೋಮನ ಕುಣಿತ, ಪೂಜಾ ಕುಣಿತ, ವೀರಗಾಸೆ, ಡೊಳ್ಳುಕುಣಿತ, ನಂದಿಕೋಲು ಕುಣಿತ ಮುಂತಾದ ಪ್ರಕಾರಗಳನ್ನು ದಕ್ಷಿಣ ಕರ್ನಾಟಕದಲ್ಲಿ ಕಾಣಬಹುದು. ಉತ್ತರ ಭಾಗದಲ್ಲಿ ಹಾಲಾವಿ ಕುಣಿತ, ಕರಡೆ ಮಜಲು, ಕೋಲಾಟ, ಗೊಂದಲಗಳ ಮೇಳ, ಹಲಗೆ ಕುಣಿತ ಮುಂತಾದವುಗಳನ್ನು ಕಾಣಬಹುದು.

ಕೊಡಗು ಜಿಲ್ಲೆಯಲ್ಲಿ ಈ ಪ್ರಕಾರಗಳಿಗೆ ವಿಭಿನ್ನವಾಗಿರುವ ಹುತ್ತರಿ ಕುಣಿತ, ಉಮತ್ತಾಟ ಕೊರಗರ ಕುಣಿತ, ಬಳುಕಾಟ ಮುಂತಾದವನ್ನು ನೋಡಬಹುದು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಭೂತನೃತ್ಯ, ಯಕ್ಷಗಾನ, ಹೊಲಕುಣಿತ ಮುಂತಾದವುಗಳನ್ನು, ಉತ್ತರ ಕನ್ನಡ ಜಿಲ್ಲೆಯಲ್ಲಿ ಹಾಲಕ್ಕಿ ಕುಣಿತ, ಪ್ರೇತ ನೃತ್ಯ ಮುಂತಾದವುಗಳನ್ನು ಕಾಣಬಹುದು.

**೪) ಭೌತಿಕ ಜಾನಪದ:**

ಇತಿಹಾಸದ ವಸ್ತು ವೈಶಿಷ್ಟ್ಯಗಳನ್ನು ಇವು ಸಾರುತ್ತವೆ. ಪರಂಪರೆಯಿಂದ ರೂಢಿಯಲ್ಲಿರುವ ಸಾಧನ ಸಲಕರಣೆಗಳು, ಆಯುಧಗಳು, ಮುಂತಾದವು ಈ ವಿಧದಲ್ಲಿ ಸೇರಿವೆ.

**ಅ) ನಂಬಿಕೆಗಳು:** 'ನಂಬಿಕೆ' ಎಂದರೆ ಒಂದು ಹೇಳಿಕೆ ಅಥವಾ ವಸ್ತುಸ್ಥಿತಿಯ ಬಗ್ಗೆ ಮಾನಸಿಕ ಒಪ್ಪಿಗೆಯನ್ನು ತೋರುವ ಪ್ರವೃತ್ತಿ ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿರುವ ಈ ನಂಬಿಕೆಗಳು ಜನತೆಯ ಮನೋಭಾವ ಹಾಗೂ ಅದಿಮ ಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ನಿರ್ದೇಶಿಸುತ್ತವೆ ಎಂದರೆ ಅತಿಶಯೋಕ್ತಿಯಾಗಲಾರದು. ಪ್ರಪಂಚದಾದ್ಯಂತ ಕಂಡುಬರುವಂತೆ ನಂಬಿಕೆಗಳು

ಕರ್ನಾಟಕದಲ್ಲೂ ಕಂಡುಬರುತ್ತವೆ. ಹೀಗೆ ಕಂಡುಬರುವ ನಂಬಿಕೆಗಳಲ್ಲಿ ವೈಜ್ಞಾನಿಕ ಸತ್ಯ, ಸಾಮಾನ್ಯ ಜ್ಞಾನ, ಪೌರಾಣಿಕ, ಐತಿಹ್ಯಗಳು ಹಾಗೂ ಹಲವು ಬಗೆಯ ಕತೆಗಳು ಅಡಕವಾಗಿವೆ. ಜನಪದ ನಂಬಿಕೆಗಳ ಉಗಮ ಮುಖ್ಯವಾಗಿ ಮೂರು ರೀತಿಯಲ್ಲಿ ಆಯಿತೆನ್ನಬಹುದು. ಧಾರ್ಮಿಕ, ಸಾಂಸ್ಕೃತಿಕ ಹಾಗೂ ವೈಯಕ್ತಿಕ ಧಾರ್ಮಿಕ ನಂಬಿಕೆಗಳು ಭಯದಿಂದ ಹುಟ್ಟಿದವು. ಮನಸ್ಸಿನ ಅಸ್ಥಿರತೆ ಮತ್ತು ಅತಿಮಾನುಷ ಬಯ ಈ ವರ್ಗದ ನಂಬಿಕೆಗಳ ಹುಟ್ಟಿಗೆ ಮುಖ್ಯಕಾರಣ. ಭೂತಾರಾಧನೆ, ಪಿತೃಪೂಜೆ, ದೇವತೆಗಳ ಆರಾಧನೆ, ಕುಲದೇವತಾ ಪದ್ಧತಿ ಇತ್ಯಾದಿಗಳಿಗೆ ಸಂಬಂಧಿಸಿದ ನಂಬಿಕೆಗಳು ಈ ಗುಂಪಿನಲ್ಲಿ ಸೇರುತ್ತವೆ. ಜನ ತಮ್ಮ ಸಂಸ್ಕೃತಿಯನ್ನು ರೂಪಿಸಿಕೊಳ್ಳುವಾಗ ಅವರ ಚಟುವಟಿಕೆಗಳಿಗೆ ತಕ್ಕಂತೆ ಈ ಕೆಲವು ನಂಬಿಕೆಗಳು ರೂಪತಾಳಿದವು. ವೈಯಕ್ತಿಕ ನಂಬಿಕೆಗಳು ಧಾರ್ಮಿಕ ಹಾಗೂ ಸಾಂಸ್ಕೃತಿಕ ನಂಬಿಕೆಗಳ ಸಂಸ್ಕಾರದಿಂದ ಒಬ್ಬ ವ್ಯಕ್ತಿಯಲ್ಲಿ ಕಾಣಿಸಿಕೊಳ್ಳುತ್ತವೆ. ಇವು ಸಾರ್ವತ್ರಿಕವಾದರೂ ವ್ಯಕ್ತಿಯಿಂದ ವ್ಯಕ್ತಿಗೆ ಬೇರೆಯಾಗಬಹುದು. ನಂಬಿಕೆಗಳಲ್ಲಿ ಸಾರ್ವತ್ರಿಕತೆ ಮತ್ತು ಪ್ರಾದೇಶಿಕತೆ ಕಂಡುಬರುತ್ತದೆ. ನಂಬಿಕೆಗಳನ್ನು ಅಧ್ಯಯನದ ದೃಷ್ಟಿಯಿಂದ ಸ್ಥೂಲವಾಗಿ ವೈಜ್ಞಾನಿಕ, ಅವೈಜ್ಞಾನಿಕ ಎಂದು ವಿಭಜಿಸಬಹುದು. ಅಲ್ಲದೆ ಮಾನುಷ, ತಿಮಾನುಷ, ಪ್ರಾಣಿ, ಪ್ರಕೃತಿ, ಕೌಟುಂಬಿಕ ಹಾಗೂ ಸಂಕೀರ್ಣ ಸಂಬಂಧವು ಎಂದು ವಿಭಜಿಸಬಹುದು. ಜನಪದರಲ್ಲಿ ನಂಬಿಕೆ ಒಂದು ಬದುಕಿನ ಕ್ರಮವಾಗಿರುತ್ತದೆ. ಇಂಥ ನಂಬಿಕೆಗಳಿಗೆ ಆಚರಣೆಯ ಭಾಗವೂ ಸಹಜವಾಗಿ ಸ್ಥಾಪಿತವಾಗುತ್ತದೆ ಇಲ್ಲಿ ಜನಪದರ ಬದುಕಿನ ಸಾಮ್ಯತೆ ಮತ್ತು ಮೌಢ್ಯತೆಯೂ ಒಟ್ಟೊಟ್ಟಿಗೇ ಇರುತ್ತದಾದರೂ ನಂಬಿಕೆಗಳು ಜನಪದ ಜೀವನ ಧೋರಣೆಗಳೇ ಆಗಿವೆ.

**ಆ) ಆಚರಣೆಗಳು:** ಕನ್ನಡ ಜಾನಪದ ಸಂದರ್ಭದಲ್ಲಿ ತೀರಾ ಸರಳವಾದ ಅರ್ಥದಲ್ಲಿ ಬಳಸಲ್ಪಡುತ್ತಿರುವ ಪದ್ಧತಿ, ಸಂಪ್ರದಾಯ, ಸಂಸ್ಕಾರ, ಆಚರಣೆ, ಆರಾಧನೆ ಇತ್ಯಾದಿ ಪದಗಳಿಗೆ ಖಚಿತ ವಿವರಣೆ ಕೊಡುವುದು ಕಷ್ಟ ಆದರೂ ಆಚರಣೆ ಎಂದರೆ 'ತಲೆತಲಾಂತರದಿಂದ ಸಮುದಾಯದ ಅಂಗೀಕಾರ ಪಡೆದು ಬಳಕೆಯಲ್ಲಿರುವ ಮಾಟ ಮತ್ತು ಧಾರ್ಮಿಕ ವಿಧಿಗಳೇ' ಎನ್ನಬಹುದು. 'ನಂಬಿಕೆಯ ಕ್ರಿಯಾತ್ಮಕ ರೂಪವೇ ಆಚರಣೆ, ನಂಬಿಕೆಯೇ ಆಚರಣೆಯ ಬೆನ್ನೆಲಬು.

ನಿರ್ದಿಷ್ಟ ಸಮಾಜದ ಒಂದು ಜಾತಿ/ಉಪಜಾತಿಯಲ್ಲಿ ಬಳಕೆಯಲ್ಲಿರವ ಆಚರಣೆಗಳ ಹುಟ್ಟಿಗೆ ಆರ್ಥಿಕ, ಸಾಮಾಜಿಕ, ಭಾವನಾತ್ಮಕವಾದ ಕಾರಣಗಳಿರುತ್ತವೆ. ಒಂದು ಜನಾಂಗದ ಜೀವನದ ವಿಧಾನದ ಬೇಡಿಕೆಯ ಅಂಗವಾಗಿ ಆಚರಣೆ ರೂಪು ತಳೆಯುತ್ತದೆ. ಮನುಷ್ಯನ ಮನಸ್ಸು ಹೇಗೆ ಪ್ರವರ್ತಿಸಬಹುದೆನ್ನವುದನ್ನು ಆಚರಣೆಗಳು

ವ್ಯಕ್ತಗೊಳಿಸುತ್ತವೆ. ಆಹಾರ ಸಂಗ್ರಹಣೆ, ಬೇಟೆ ಪಶುಪಾಲನೆ, ಕೃಷಿ ಹೀಗೆ ಮಾನವನ ಆರ್ಥಿಕ ಚಟುವಟಿಕೆಯ ವಿವಿಧ ಹಂತಗಳಲ್ಲಿ ಆಚರಣೆಗಳು ಹುಟ್ಟಿಕೊಂಡಿವೆ. ಮನುಷ್ಯನನ್ನು ಕುರಿತು ಮಾತ್ರವಲ್ಲದೆ ದೇವರು, ಸಸ್ಯ, ಪ್ರಾಣಿಗಳನ್ನು ಕುರಿತಂತೆಯೂ ಆಚರಣೆಗಳು ಹುಟ್ಟಿಕೊಂಡಿವೆ. ಜನಪದರಲ್ಲಿ ಇರುವ ಬಲಿಯೇ ಮುಂತಾದ ಕ್ರೂರ ಆಚರಣೆಗಳನ್ನು ಕಿತ್ತೊಗೆಯಲು ಎಲ್ಲ ಶಿಷ್ಟ ಧರ್ಮಗಳೂ ಪ್ರಯತ್ನಿಸಿವೆ. ಆದ್ದರಿಂದ ತಮ್ಮ ದೇವರುಗಳನ್ನು ಸಂಪ್ರೀತವಾಗಿಸಲು ಮಾಡುತ್ತಿದ್ದ ಭಯಂಕರ ಆಚರಣೆಗಳು ಸಾಧುವಾಗುತ್ತ ಬಂದಿರುವುದೇ ಅವುಗಳ ಇತಿಹಾಸವಾಗಿದೆ.

ಆಚರಣೆಗಳು ಕಾಲ ಬದಲಾದಂತೆ ತಾವೂ ಬದಲಾಗಿ ಹೊಸ ಸಾಮಾಜಿಕ ವ್ಯವಸ್ಥೆಯಲ್ಲಿ ಕಣ್ಮರೆಯಾಗಬಹುದು. ಬೆಳಗಾಂ ಜಿಲ್ಲೆಯ ಸವದತ್ತಿ ಎಲ್ಲಮ್ಮನ ದೇವಾಲಯದ ಮೇಲೆ ಕೆತ್ತಿರುವ ಚಿತ್ರದಲ್ಲಿ ಯಲ್ಲಮ್ಮನ ಅಕ್ಕಪಕ್ಕ ಇರಬೇಕಾದ ಇಬ್ಬರು ರಾಕ್ಷಸರ ಬದಲಾಗಿ ಇಬ್ಬರು ಬಂದೂಕುಧಾರಿ ಪೊಲೀಸರಿರುವುದು ಬದಲಾಗಿರುವ ಜನತೆಯ ಮನೋಧರ್ಮವನ್ನು ಸ್ಪಷ್ಟಪಡಿಸುತ್ತದೆ. ಹೀಗೆ ಮನುಷ್ಯರ ಸಾಮಾಜಿಕ, ಆರ್ಥಿಕ ಜೀವನದೊಡನೆ ನಿಕಟ ಸಂಪರ್ಕ ಪಡೆದಿರುವ, ಅವನ ಬದುಕಿನ ವಿವಿಧ ಘಟ್ಟಗಳಲ್ಲಿ ಅನುಭವಿಸುವ ಮಾನಸಿಕ ಹಾಗೂ ದೈಹಿಕ ಸ್ಥಿತಿಗಳಿಗೆ ಸಂಬಂಧಿಸಿದ, ಸಸ್ಯ, ಪ್ರಾಣಿ, ಮಕ್ಕಳ ಹೆಚ್ಚಳಕ್ಕಾಗಿ ಆಗುವ ಆಚರಣೆಗಳು ಎಲ್ಲ ಸಮಾಜಗಳಲ್ಲೂ ಇರುವಂಥವಾಗಿವೆ.

**ಇ) ಸಂಪ್ರದಾಯಗಳು:** ಒಂದು ಸಾಮಾಜಿಕ ವರ್ಗ ಪರಂಪರಾಗತವಾಗಿ ಅನುಸರಿಸುತ್ತಾ ಬಂದಿರುವ ಕ್ರಿಯಾ ವಿನ್ಯಾಸವನ್ನು ಸಂಪ್ರದಾಯ ಎನ್ನಬಹುದು. ಒಂದು ಸಾಮಾಜಿಕ ವರ್ಗದಲ್ಲಿ ಒಬ್ಬ ವ್ಯಕ್ತಿಯ ಅಭ್ಯಾಸ ಸಂಪ್ರದಾಯವಾಗುವುದಿಲ್ಲ. ಜನ ಏನು ಮಾಡುತ್ತಾರೆಂಬುದನ್ನು ತಿಳಿಸುವ ಸಂಪ್ರದಾಯದ ಪ್ರಮುಖ ಲಕ್ಷಣವೆಂದರೆ ಅದರ ಸಾಮೂಹಿಕತೆ ಜನಪದರ ಬದುಕಿನ ಎಲ್ಲ ಮಗ್ಗಲುಗಳನ್ನೂ ಆವರಿಸಿಕೊಂಡಿರುವ ಸಂಪ್ರದಾಯಗಳು ಅವರ ನಂಬಿಕೆಗಳನ್ನು ಆಧರಿಸಿರುತ್ತವೆ. ನಂಬಿಕೆಯನ್ನು ಆಧರಿಸಿದ ಯಾವುದೇ ಒಂದು ಆಚರಣೆ ರೂಢಿಗತವಾಗಿ ಒಂದು ಸಮಾಜದಲ್ಲಿ ಸ್ಥಾಪನೆಯಾದಾಗ ಅದು ಸಂಪ್ರದಾಯವಾಗುತ್ತದೆ. ಈ ಸಂಪ್ರದಾಯ ತಲೆಮಾರಿನಿಂದ ತಲೆಮಾರಿಗೆ ಪ್ರವಹಿಸುತ್ತಿರುತ್ತದೆ. ಒಂದು ಆಚರಣೆಯು ಸಂಪ್ರದಾಯವಾಗಿ ಮುಂದುವರಿಯುವಾಗ ಆಚರಣೆಯ ಹಿಂದೆ ಇದ್ದ ನಂಬಿಕೆಯ ಪ್ರಜ್ಞೆ ಬಹುಮಟ್ಟಿಗೆ ಕಳೆದುಹೋಗುತ್ತದೆ ಅಥವಾ ಅಸ್ಪಷ್ಟವಾಗಿರುತ್ತದೆ.

ಈಗ ಬಹುಪಾಲು ಕಣ್ಮರೆಯಾಗುತ್ತಿರುವ ಒಂದು ಜನಪದ ಸಂಪ್ರದಾಯ ಹಚ್ಚೆ ಹಾಕಿಸಿಕೊಳ್ಳುವುದು ಮುತ್ತೈದೆತನದ ಲಕ್ಷಣವಾಗಿಯೋ ವೈದ್ಯಕೀಯ ಕಾರಣಗಳಿಂದಾಗಿಯೋ ಪ್ರೀತಿಯ ಕುರುಹಾಗಿಯೋ, ಅಲಂಕಾರ ಸಾಧನವಾಗಿಯೋ ಬಳಕೆಗೆ ಬಂದಿರಬಹುದಾದ ದೇಹದ ವಿವಿಧ ಭಾಗಗಳಲ್ಲಿ ಕಲಾತ್ಮಕವಾಗಿ ಗುರುತು ಮಾಡುವಂತೆ ಹಾಕಿಸಿಕೊಳ್ಳಲಾಗುತ್ತಿದ್ದ ಹಚ್ಚೆ ಅನೇಕ ಶತಮಾನಗಳನ್ನು ದಾಟಿಕೊಂಡು ಬಂದ ಮೇಲೆ ಹಿಂದಿನವರು ಹಾಕಿಸಿಕೊಳ್ಳುತ್ತಿದ್ದರೆನ್ನುವ ಕಾರಣಕ್ಕೆ ಈಗಿನವರೂ ಹಾಕಿಸಿಕೊಳ್ಳುವ ಪದ್ಧತಿಯಷ್ಟೇ ಉಳಿದಿದೆ. ಸತ್ತವರನ್ನು ಹೂಳುವ, ದಹನ ಮಾಡುವ, ಕಲ್ಲುಗಳಿಂದ ಮುಚ್ಚುವ, ಹದ್ದುಗಳಿಗೆ ಆಹಾರವಾಗಿಸುವ ದೇಹವನ್ನು ಕೊಚ್ಚಿ ಪ್ರಾಣಿಗಳಿಗೆಸೆಯುವ ನಾನಾ ತೆರನಾದ ಸಂಪ್ರದಾಯಗಳು ನಿಮ್ಮ ದೇಶದ ವಿವಿಧ ಭಾಗಗಳಲ್ಲಿ ರೂಢಿಯಲ್ಲಿವೆ. ಪಾರ್ಥಿವ ಶರೀರವನ್ನು ಹೀಗೆ ಹಲವು ಬಗೆಯಲ್ಲಿ ಸಂಸ್ಕಾರ ಮಾಡುವ ರೂಢಿಯ ಹಿಂದಿರುವ ಕಾರಣ ಈಗ ಸ್ಪಷ್ಟವಾಗಿದ್ದು ಅವರವರ ಕುಟುಂಬ, ಹಳ್ಳಿ, ಜಾತಿ, ಬುಡಕಟ್ಟುಗಳಲ್ಲಿ ಹಿಂದಿನಿಂದಲೂ ಹೆಣವನ್ನು ಹೇಗೆ ಸಂಸ್ಕಾರ ಮಾಡಲಾಗುತ್ತಿತ್ತೋ ಆ ಪದ್ಧತಿಯನ್ನು ಮುಂದುವರಿಸಿಕೊಂಡು ಹೋಗಲಾಗುತ್ತಿದೆ.

ಸಂಪ್ರದಾಯಗಳಿಲ್ಲದೆ ಸಮಾಜವಿಲ್ಲ, ಸಂಸ್ಕೃತಿಯಿಲ್ಲ, ಅವು ಮಾನವನ ಬದುಕಿನ ಉದ್ದಗಲಕ್ಕೂ ಹರಡಿಕೊಂಡಿವೆ. ತಲತಲಾಂತರಗಳಿಂದ ಬಂದ ನಮ್ಮ ಹಿರಿಯರ ಧಾರ್ಮಿಕ ಪರವಾದ ಆಚಾರ-ವಿಚಾರ, ನಡೆನುಡಿಗಳನ್ನು ಚಾಚೂತಪ್ಪದೆ ಒಂದು ಕೇರಿ, ಒಂದು ಊರು, ಒಂದು ನಾಡಿನಲ್ಲಿ ವಾಸಿಸುವ ಜನಸಮೂಹವು ಒಟ್ಟುಗೂಡಿ ಆಚರಿಸುವಾಗ ಉಂಟಾಗುವ ಸಂಸ್ಕೃತಿಯ ಮೊತ್ತವನ್ನು ಒಟ್ಟಾಗಿ ನಾವು "ಸಂಪ್ರದಾಯ" ಎಂದು ಕರೆಯಬಹುದಾಗಿದೆ. ತಲೆಮಾರಿನಿಂದ ತಲೆಮಾರಿಗೆ ಮುಂದುವರೆಯುವ ವಿಧಿಗಳು, ಉಪಾಸನೆ, ಪದ್ಧತಿಗಳು ಸೇರಿವೆ. ಇದು ಜಾನಪದ ಒಂದು ಪ್ರಕಾರವಾಗಿದೆ. ಪ್ರಾಚೀನ ಕಾಲದಿಂದಲೂ ಮಾನವ ಕೆಲವು ನಂಬಿಕೆಗಳಿಂದ ಬದುಕಿದ್ದಾನೆ. ಈ ನಂಬಿಕೆಗಳೇ ಸಂಪ್ರದಾಯಗಳ ಸೃಷ್ಟಿಗೆ ಕಾರಣವಾಗುತ್ತವೆ. ಇವು ಒಂದೊಂದು ಸಮಾಜಕ್ಕೂ ಬೇರೆ ಬೇರೆಯಾಗಿರುತ್ತವೆ. ಸಂಪ್ರದಾಯವು ಸಾಮೂಹಿಕ ಆಚರಣೆಯಿಂದ ಪರಂಪರಾಗತವಾಗಿ ಬೆಳೆದು ಸಮಾಜವನ್ನು ತನ್ನ ಹಿಡಿತದಲ್ಲಿಟ್ಟು-ಕೊಂಡು ಬಂದಿದೆ. ಸಂಪ್ರದಾಯವು ಮಾನವ ಬದುಕಿನಲ್ಲಿ ಅನೇಕ ನಿಯಮ, ಸಂಯಮಗಳನ್ನು ಪಾಲಿಸಲು ಅವಕಾಶವೀಯುತ್ತ ಬಂದಿದೆ. ಜನಪದರು ರೂಪಿಸಿಕೊಂಡಂಥ ಇಂಥ ಕಟ್ಟುನಿಟ್ಟಿನಿಂದಾಗಿ ಪ್ರಜೆಗಳ ನಡುವೆ ನಿಯಮೋಲ್ಲಂಘನೆ-ಯಾಗದ ಹಾಗೆ ಅಪ್ರಜ್ಞಾಪೂರ್ವಕವಾಗಿ ನಿಯಂತ್ರಣ ಸಾಧ್ಯವಾಗಿ, ಎಲ್ಲ ಆಗುಹೋಗುಗಳು ಸುಸೂತ್ರವಾಗಿ ನಡೆದುಕೊಂಡು ಬರುತ್ತಿವೆ. ಸಂಪ್ರದಾಯವು

ಪ್ರಮುಖವಾಗಿ ಜನಪದ ನಂಬಿಕೆಗಳು, ವೈದ್ಯ, ವಿನೋದ, ವ್ಯವಸಾಯ, ನ್ಯಾಯ, ಸಹಕಾರ ಮನೋಭಾವ, ನಡೆನುಡಿ, ಭಯಭಕ್ತಿ ಮುಂತಾದವು ಗಳನ್ನು ತನ್ನ ತೆಕ್ಕೆಯೊಳಗೆ ಸೇರಿಸಿಕೊಂಡು ಅವಕ್ಕೆ ಆಗಾಗ ಜೀವ ತುಂಬಿ ತನ್ನ ಪ್ರಭಾವವನ್ನು ಸಮಾಜದ ಮೇಲೆ ಬೀರುತ್ತಿರುತ್ತದೆ.

**ಈ) ಆರಾಧನೆಗಳು:** ಒಂದು ಸಮಾಜದಲ್ಲಿ ಒಂದು ಸ್ತರದ ಜನರು ಒಂದು ನಂಬಿಕೆಯ ಮೇಲೆ ಅವರು ಪೂರ್ಜ್ಯುಭಾವನೆಗಳನ್ನಿಟ್ಟು ಪೂಜಿಸಿಕೊಂಡು ಬರುವಂತಹ ಒಂದು ಕ್ರಮವೇ 'ಆರಾಧನೆ'. ಹಿಂದೆ ಜಾನಪದೀಯ ಅಂಶಗಳನ್ನು ಒಳಗೊಂಡ ಸಮಾಜದ ವರ್ಗವು ಹೆಚ್ಚಾಗಿದ್ದು, ಇಂತಹ ವರ್ಗವು ಇತ್ತೀಚೆಗೆ ಕಡಿಮೆಯಾಗುತ್ತಿದೆ ಎಂದುಕೊಂಡರೂ 'ದೇಶ, ಭಾಷೆ, ಧರ್ಮ ಎಂಬ ಸಂಸ್ಕೃತಿಯಲ್ಲಿ ಆರಾಧನೆಗಳೂ ಕೂಡ ಸಾಗುತ್ತಲೇ ಬಂದಿರುವುದು ಸತ್ಯವಾದುದ್ದು. ಆರಾಧನೆಗಳಿಲ್ಲದೆ ದೈವಶಕ್ತಿಯನ್ನು ಪೂಜಿಸಲು ಸಾಧ್ಯವಿಲ್ಲ. ಆಹ್ವಾನಿಸಿಕೊಳ್ಳಲು ಸಾಧ್ಯವಿಲ್ಲ. ನಂಬಿಕೆಗಳ ಮುಂದುವರಿದ ಭಾಗವೇ ಆರಾಧನೆಗಳು ಎನ್ನಬಹುದು. ಭಾರತೀಯ ಸಂಸ್ಕೃತಿಯಲ್ಲಿ ಆರಾಧನೆಗಳಿಗೆ ಮುಖ್ಯವಾದ ಸ್ಥಾನವಿದೆ. ವಿಗ್ರಹರಾಧನೆಯೇ ಅತಿ ಮುಖ್ಯವಾದ ವಿಷಯ ಕಟ್ಟುನಿಟ್ಟಿನ ಆರಾಧನೆಗಳೂ ಉಂಟು. ಜನಪದರ ನಂಬಿಕೆಯನ್ನು ದೇವರ ಮೇಲಿನ ಗೌರವ, ಭಯಭಕ್ತಿಯನ್ನು ಆರಾಧನೆಗಳ ಮೂಲಕ ತೋರಿಸುತ್ತಾರೆ. ಆರಾಧನೆಗಳೂ ಕೂಡ ಸಂಸ್ಕೃತಿಯ ಒಂದು ಭಾಗವೇ ಆಗಿರುವುದು ಜನಪದರ ಒಂದು ನಂಬಿಕೆ.

# ಅಧ್ಯಾಯ - ೨

# ಭೌಗೋಳಿಕ ಹಿನ್ನಲೆ, ಸ್ಥಳನಾಮಪುರಾಣ –ಇತಿಹಾಸ, ಪದನಿಷ್ಪತ್ತಿ

**ಭೌಗೋಳಿಕ ಹಿನ್ನೆಲೆ:** ಯಾವುದೇ ಒಂದು ದೇಶವಾಗಲೀ, ರಾಜ್ಯವಾಗಲೀ, ಜಿಲ್ಲೆಯಾಗಲೀ ಅಥವಾ ಒಂದು ಪ್ರದೇಶವಾಗಲಿ ಅದರ ಚರಿತ್ರೆಯನ್ನು ದಾಖಲಿಸುವಾಗ ಅಲ್ಲಿನ ಭೌಗಳಿಕ ಹಿನ್ನೆಲಯನ್ನು ಮೊದಲು ದಾಖಲಿಸುವುದು ಅತ್ಯಂತ ಮುಖ್ಯವಾದ ಅಂಶಗಳಲ್ಲೊಂದಾಗಿದೆ. ಭೌಗೋಳಿಕ ಹಿನ್ನೆಲೆಯು ಆ ಪ್ರದೇಶದ ನೈಸರ್ಗಿಕ ಹಿನ್ನೆಲೆ–ಯಾಗಿಯೂ ನಿಲ್ಲುತ್ತದೆ. ಈ ನಿಟ್ಟಿನಲ್ಲಿ ಕ್ಯಾತನಹಳ್ಳಿಯ ಭೌಗೋಳಿಕ ಪರಿಚಯವನ್ನು ಮಾಡಿಕೊಡಲು ಪ್ರಯತ್ನಿಸುತ್ತೇನೆ. ಭಾರತದ ಭೂಪಟದಲ್ಲಿ ಕರ್ನಾಟಕ ರಾಜ್ಯವು ಎಷ್ಟು ಮುಖ್ಯವಾದ ಸ್ಥಾನವನ್ನು ಪಡೆದುಕೊಂಡಿರುವುದು ಸತ್ಯವೋ ಹಾಗೆಯೇ ಕರ್ನಾಟಕ ರಾಜ್ಯದಲ್ಲಿ ಮೈಸೂರು ಜಿಲ್ಲಯೂ ಕೂಡ ಅಷ್ಟೇ ಹೆಸರುಗಳಿಸಿದ ಜಿಲ್ಲೆಯಾಗಿದೆ. ಇಂತಹ ಜಿಲ್ಲೆಯಲ್ಲಿ ಹಿಂದುಳಿದ ತಾಲ್ಲೂಕು ಎಂಬ ಹಣೆಪಟ್ಟಿಯನ್ನು ಕಟ್ಟಿಕೊಂಡು, ಆದರೆ ಭೌಗೋಳಿಕವಾಗಿ, ನೈಸರ್ಗಿಕವಾಗಿ ಶ್ರೀಮಂತತೆಯಿಂದ ಕೂಡಿರುವ ಹೆಗ್ಗಡದೇವನಕೋಟೆಯ ಹಂಪಾಪುರ ಹೋಬಳಿಯಲ್ಲಿ ಸಾಂಸ್ಕೃತಿಕ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಕ್ಯಾತನಹಳ್ಳಿ ಗ್ರಾಮವು ಇದೆ.

ಕ್ಯಾತನಹಳ್ಳಿ ಗ್ರಾಮದ ಸಾಂಸ್ಕೃತಿಕ ಅಧ್ಯಯನವನ್ನು ಆಯ್ಕೆ ಮಾಡಿಕೊಳ್ಳಲು ಮುಖ್ಯಕಾರಣವೆಂದರೆ ಇದು ನನ್ನ ಸ್ವಂತ ಜನ್ಮಸ್ಥಳವಾಗಿರುವುದು ಒಂದು ಮುಖ್ಯಕಾರಣ. ಆದ್ದರಿಂದಲೇ ಈ ನಿಬಂಧದಲ್ಲಿ ಸ್ವಲ್ಪ ಆತ್ಮೀಯತೆ ಹೆಚ್ಚಾಗೇ ಕಂಡುಬರುತ್ತದೆ. ಮೈಸೂರು ನಗರದಿಂದ ಪಶ್ಚಿಮ ದಿಕ್ಕಿಗೆ ಸುಮಾರು ೨೪ ಕಿ.ಮೀ. ದೂರವನ್ನು ಮೈಸೂರು–ಗದ್ದಿಗೆ ರಸ್ತೆಯಲ್ಲಿ ಕ್ರಮಿಸಿದರೆ ಕ್ಯಾತನಹಳ್ಳಿಯ ಮಾರ್ಗ ಮಧ್ಯದಲ್ಲಿ ಸಿಗುತ್ತದೆ. ಕ್ಯಾತನಹಳ್ಳಿಯ ತಾಲ್ಲೂಕ ಕೇಂದ್ರವಾದ ಹೆಗ್ಗಡದೇವನ ಕೋಟೆಯಿಂದ ಸುಮಾರು ೩೫ ಕಿ.ಮೀ. ದೂರದಲ್ಲಿದೆ. ಮೈಸೂರಿನೊಂದಿಗೆ ಹೆಚ್ಚಿನ ಒಡನಾಟವನ್ನು ಇಟ್ಟುಕೊಂಡಿರುವುದಕ್ಕೆ ಇದೂ ಒಂದು ಕಾರಣವಾಗಿದೆ. ಮೈಸೂರಿನಿಂದ ಕ್ಯಾತನಹಳ್ಳಿಗೆ ಹೋಗುವ ಮಾರ್ಗದಲ್ಲಿ ಕುರುಚಲು ಅರಣ್ಯ ಕಂಡುಬರುತ್ತದೆ. ಜೊತೆಗೆ ಫೌಲ್ಟ್ರಿ ಫಾರಂಗಳಂತೂ ಯಥೇಚ್ಚವಾಗಿ ಕಂಡುಬರುತ್ತದೆ. ಇದರಿಂದಾಗಿ ಕುಕ್ಕುಟೋದ್ಯಮಕ್ಕೂ ಉತ್ತೇಜನಕಾರಿ ವಾತಾವರಣ ಕಂಡುಬರುತ್ತದೆ. ಕ್ಯಾತನಹಳ್ಳಿಯ ಪಶ್ಚಿಮಕ್ಕೂ ಗಂಗಡಹೊಸಹಳ್ಳಿ, ಪೂರ್ವಕ್ಕೆ ಆಲನಹಳ್ಳಿ ಗ್ರಾಮಗಳಿವೆ. ಆಲನಹಳ್ಳಿಯ ಪ್ರಸಿದ್ಧ ಲೇಖಕರಾದ "ಆಲನಹಳ್ಳಿ ಕೃಷ್ಣ" ಅವರ ಜನ್ಮಸ್ಥಳ. ಹಾಗೆಯೇ ಯು.ಆರ್.ಅನಂತಮೂರ್ತಿ ಅವರ "ಫಾರಂ ಹೌಸ್" ಕೂಡ ಇದೆ. ಹೆಗ್ಗಡದೇವ–

ನೆಂಬ ಪಾಳೆಗಾರ ವಾಸಿಸುತ್ತಿದ್ದ ಸ್ಥಳವಾದ ಹೆಗ್ಗಡಪುರವು 'ಹಗ್ಗಡದೇವನಕೋಟೆ'-ಯಾಗಿದೆ. ಈ ತಾಲ್ಲೂಕು ನೈಸರ್ಗಿಕವಾಗಿ ಶ್ರೀಮಂತವಾಗಿರುವುದು ಕಾಕನಕೋಟೆ ಕಾಡು, ಹಾಗೂ ಬಂಡೀಪುರ ಅರಣ್ಯಗಳಿಂದ ಈ ತಾಲ್ಲೂಕಿನಲ್ಲಿ ಕಬಿನಿ ನದಿಗೆ ಅಣೆಕಟ್ಟನ್ನು ಕಟ್ಟಿದ್ದು, 'ಬೀಚನಹಳ್ಳಿ ಡ್ಯಾಂ' ಎಂದೇ ಹೆಸರುವಾಸಿಯಾಗಿದೆ. ಇದು ಕ್ಯಾತನಹಳ್ಳಿಯಿಂದ ೩೦ ಕಿ.ಮೀ ದೂರದಲ್ಲಿದೆ.

ಈ ಅಣೆಕಟ್ಟೆ ಈ ಊರಿನಿಂದ ಕೆಲವೇ ಕಿ.ಮೀ. ಅಂತರದಲ್ಲಿದ್ದರೂ ಕೂಡ ಇಲ್ಲಿನ ಸುತ್ತಮುತ್ತಲಿನ ಯಾವ ಹಳ್ಳಿಗೂ ನೀರಾವರೀ ವ್ಯವಸ್ಥೆ ಇಲ್ಲ. ಇಲ್ಲಿ ನೀರಾವರಿ ಇಲ್ಲದಿರುವುದರಿಂದ ಇದು ಬರಡುಭೂಮಿ ಎಂದೇ ಕರೆಯಲ್ಪಡುತ್ತದೆ. ಆದರೂ ಮಳೆ ಆಶ್ರಯದಿಂದ ಹಾಗೂ ಪಂಪ್‌ಸೆಟ್ ಅಳವಡಿಕೆಯಿಂದ ಇಲ್ಲಿನ ಭೂಮಿ ಬೆಳೆಯನ್ನು ಕೊಡುತ್ತಿದೆ. ಕ್ಯಾತನಹಳ್ಳಿಯಿಂದ ಹೆಗ್ಗಡದೇವನಕೋಟೆಗೆ ಹೋಗುವ ಮಾರ್ಗದಲ್ಲಿ 'ಗದ್ದಿಗೆ' ಎಂಬ ಊರು ಸಿಗುತ್ತದೆ. ಅದು ಹುಣಸೂರು ತಾಲ್ಲೂಕಿಗೆ ಸೇರಿದ್ದರೂ ಕೂಡ ಅದು ಕೋಟೆಯ ಒಂದು ಭಾಗವೇನೋ ಅನ್ನಿಸುತ್ತದೆ. ಇಲ್ಲಿ ಪ್ರಖ್ಯಾತವಾದ 'ಕೆಂಡಗಣ್ಣಸ್ವಾಮಿ' ಎನ್ನುವ ದೇವರಿದ್ದು, 'ಕೆಂಡಗಣ್ಣಸ್ವಾಮಿ ಗದ್ದಿಗೆ' ಎಂದೇ ಪ್ರಸಿದ್ಧಿ ಪಡೆದುಕೊಂಡಿದೆ. ಇದು ಕೆಂಡಗಣ್ಣ ಎಂಬುವವರು ಐಕ್ಯವಾದ ಸ್ಥಳವಾಗಿದ್ದು, ಅವರ ನೆನಪಿಗೆ ಗದ್ದಿಗೆಯೊಂದನ್ನು ಕಟ್ಟಿದ್ದುದರಿಂದ, ಅಂದಿನಿಂದಲೇ ಈ ಊರಿಗೆ 'ಗದ್ದಿಗೆ' ಎಂಬ ಹೆಸರು ಬಂದಿದೆ. ಇಂದು ಇದು ಉತ್ತಮ ಪ್ರವಾಸಿ ಸ್ಥಳವಾಗಿದ್ದು, ಪ್ರತಿದಿನ ಸಾವಿರಾರು ಭಕ್ತರು ಭೇಟಿನೀಡುತ್ತಿದ್ದಾರೆ. ಜಾತ್ರೆ-ಉತ್ಸವ, ಹಬ್ಬ-ಹರಿದಿನಗಳಲ್ಲಿ ತೇರು ಉತ್ಸವ ನಡೆಯುತ್ತದೆ. ಪ್ರತೀ ದಿನ ನೂರಾರು ಭಕ್ತರು ಇಲ್ಲಿ ಅನ್ನಸಂತರ್ಪಣೆಯನ್ನು ಸ್ವೀಕರಿಸುತ್ತಾರೆ. ಕ್ಯಾತನಹಳ್ಳಿಯಿಂದ ಹಂಪಾಪುರ ಹೋಬಳಿಗೆ ಹೋಗಿ ಅಲ್ಲಿ ಹೊಮ್ಮರಗಳ್ಳಿ ಎಂಬ ಊರಿನ ಮೇಲೆ ಹೋದರೆ 'ಸಂಗಮ' ಎಂಬ ಧ್ಯಾನ ಕ್ಷೇತ್ರವೊಂದಿದೆ. ಅಲ್ಲಿ 'ಮಹದೇವ ತಾತ' ಎಂಬ ದೈವೀ ಭಕ್ತರು ಐಕ್ಯಯರಾದ ಒಂದು ದಿವ್ಯ ಸನ್ನಿಧಿ ಇಲ್ಲಿ ಮೂರು ಚಿಕ್ಕ ಹೊಳೆಗಳು ಸೇರುತ್ತವೆ. ಅಂತಹ ಸ್ಥಳವೇ ಸಂಗಮವಾಗಿದೆ. ಇಲ್ಲಿಯೂ ನೂರಾರು ಭಕ್ತರು ಬಂದುಹೋಗುತ್ತಾರೆ.

ಕ್ಯಾತನಹಳ್ಳಿಯು ಉಷ್ಣವಲಯದ ಸಮಶೀತೋಷ್ಣ ಪ್ರದೇಶದಂತಿದೆ. ಇಲ್ಲಿ ಅಕ್ಕಪಕ್ಕ ಯಾವ ನದಿಯೂ ಹರಿಯುವುದಿಲ್ಲ. ಕಾಲುವೆಗಳೂ ಇಲ್ಲ. ಕ್ಯಾತನಹಳ್ಳಿ ವ್ಯವಸಾಯ ಕ್ಯಾತನಹಳ್ಳಿಯ ಪ್ರಾಣಿಪಕ್ಷಿಗಳೆಲ್ಲವೂ ಮಳೆನೀರನ್ನು ನೆಚ್ಚಿಕೊಂಡಿವೆ. ಮಳೆನೀರನ್ನು ಸಂಗ್ರಹಿಸಲು ನೂರಾರು ವರ್ಷಗಳ ಹಳೆಯ ಕೆರೆಗಳೂ ಇವೆ. ಊರಿನ ಒಳಗೆ ಒಂದು ಕೆರೆ ಇದೆ. ಇದು ಲಕ್ಷ್ಮಿಕಾಂತ ದೇವಾಲಯದ ಪಕ್ಕದಲ್ಲಿದೆ. ಇದೇ ಕೆರೆ ಇಡೀ ಕ್ಯಾತನಹಳ್ಳಿಗೆ ಒಂದು ಕಾಲದಲ್ಲಿ ಜೀವಾಳವಾಗಿದ್ದಿತು. ಆಧುನಿಕತೆ

ಬೆಳೆದಂತೆ ಬಾವಿಗಳು ಜನ್ಮತಾಳಿದವು. ನಂತರ ಪ್ರತೀಮನೆಗೂ ನಲ್ಲಿ ನೀರು ಸರಬರಾಜಿನ ವ್ಯವಸ್ಥೆಯಾಯಿತು. ಇಲ್ಲಿನ ಪರಿಸರವು ತುಂಬಾ ತಂಪಾದ ವಾತಾವರಣದಿಂದ ಕೂಡಿರುತ್ತದೆ. ಅದಕ್ಕೆ ಕಾರಣ ಇಲ್ಲಿನ ಹಸಿರು ಯಾವಾಗಲೂ ಹಸಿರು ಗಿಡಮರಗಳಿಂದ ತುಂಬಿರುತ್ತದೆ. ಆದ್ದರಿಂದಲೇ ಪರಿಸರ ತಂಪಾಗಿರುತ್ತದೆ. ಕ್ಯಾತನಹಳ್ಳಿಯಿಂದ ಆರು ಕಿಲೋಮೀಟರ್ ದೂರದಲ್ಲಿ 'ಅವರಗೆರೆ ಬೆಟ್ಟ' ಎಂಬ ಬೆಟ್ಟವಿದೆ. ನೋಡಲು ಮನಮೋಹಕವಾಗಿದೆ. ಎತ್ತರ ಸುಮಾರು ನೂರರಿಂದ ನೂರಐವತ್ತು ಮೀಟರ್‌ಗಳಷ್ಟಿರಬಹುದು. ಇದರ ಪಕ್ಕದಲ್ಲೇ ಚಾಮಲಾಪುರವೆಂಬ ಹಳ್ಳಿ ಇದ್ದು, ಇಂದಿಗೆ ಸುಮಾರು ಎರಡು ವರ್ಷಗಳ ಹಿಂದೆ ಶಾಖೋತ್ಪನ್ನ ವಿದ್ಯುತ್ ಘಟಕ ಸ್ಥಾಪಿಸಲು ಈ ಜಾಗವನ್ನು ಆಯ್ಕೆಮಾಡಿದ್ದರು. ಅದರ ನೀಲಿನಕ್ಷೆಯನ್ನು ಸುಮಾರು ಎರಡು ಸಾವಿರ ಹೆಕ್ಟೇರ್ ಜಾಗಕ್ಕೆ ರಚಿಸಿದ್ದರು. ಆದರೆ ನಮ್ಮೂರಿನ ಹಾಗೂ ಸುತ್ತಮುತ್ತಲ ಊರುಗಳ ಜನರು, ರೈತರು ಪರಿಸರಕ್ಕಾಗಿ ಹಾಗೂ ತಮ್ಮ ಫಲವತ್ತಾದ ಭೂಮಿಯನ್ನು ಉಳಿಸಿಕೊಳ್ಳಲು ಹೋರಾಟಗಳು, ಚಳುವಳಿಗಳನ್ನು ನಡೆಸಿ ಆ ಒಂದು ಘಟಕದ ಆರಂಭಕ್ಕೆ ತಡೆಒಡ್ಡಿದ್ದಾರೆ. ಕ್ಯಾತನಹಳ್ಳಿಯು ಭೌಗೋಳಿಕವಾಗಿ ಇತರ ಹಳ್ಳಿಗಳಿಗೆ ಹೋಲಿಸಿದರೆ ಭೂಮಟ್ಟಕ್ಕಿಂತ ಸ್ವಲ್ಪ ಕೆಳಭಾಗದಲ್ಲಿದೆ, ಇಲ್ಲಿನ ಭೌಗೋಳಿಕ ಹಿನ್ನೆಲೆಯಲ್ಲಿ ವ್ಯವಸಾಯಕ್ಕೆ ಯೋಗ್ಯವಾದ ಕಪ್ಪುಮಣ್ಣು ಯಥೇಚ್ಛವಾಗಿ ಹರಡಿದೆ. ಜೊತೆಗೆ ಅಲ್ಲಲ್ಲಿ ಕಪ್ಪುಮಿಶ್ರಿತ ಕೆಂಪು ಮಣ್ಣೂ ಕೂಡ ಕಂಡುಬರುತ್ತದೆ. ಆದ್ದರಿಂದ ಇಲ್ಲಿ ಹೆಚ್ಚಾಗಿ ರೈತರು ಹತ್ತಿಯನ್ನು ವಾಣಿಜ್ಯ ಬೆಳೆಯಾಗಿ ಬೆಳೆಯುತ್ತಾರೆ. ಜೊತೆಗೆ ನೀರಾವರಿ ಮಾಡಿಕೊಂಡಿರುವ ಬೆರಳೆಣಿಕೆಯಷ್ಟು ಜನ ಕಬ್ಬು ಹಾಗೂ ಭತ್ತವನ್ನೂ ಬೆಳೆಯುತ್ತಾರೆ. ಆಹಾರ ಬೆಳೆಯಾಗಿ ಇಲ್ಲಿ ಹೆಚ್ಚಾಗಿ ರಾಗಿಯನ್ನ ಬೆಳೆಯಲಾಗುತ್ತದೆ. ಹಾಗೆಯೇ ಅನೇಕರು ಸಮೃದ್ಧವಾದ ತೆಂಗಿನ ತೋಟಗಳನ್ನೂ ಬೆಳೆಸಿಕೊಂಡಿದ್ದಾರೆ. ಇತ್ತೀಚೆಗೆ ಇಲ್ಲಿ ಅತೀಮುಖ್ಯವಾಗಿ ಮಾವನ್ನು ಹೆಚ್ಚಾಗಿ ಬೆಳೆದಿದ್ದಾರೆ. ಒಬ್ಬ ರೈತನ ಬಳಿ ಐದು ಎಕರೆ ಜಮೀನಿದ್ದರೆ, ಅದರಲ್ಲಿ ಅರ್ಧದಷ್ಟು ಜಮೀನಿಗೆ ಮಾವಿನ ಗಿಡಗಳನ್ನು ಬೆಳೆಸಿರುತ್ತಾರೆ. ಇದೂ ಈ ಭಾಗದ ರೈತರ ಮುಖ್ಯ ಬೆಳೆಯಾಗಿದೆ.

ಕ್ಯಾತನಹಳ್ಳಿಯು ಹಿಂದುಳಿದ ಪ್ರದೇಶವೆಂದುಕರೆಸಿಕೊಂಡಿದ್ದರೂ, ಇದು ಭೌಗೋಳಿಕವಾಗಿ ಶ್ರೀಮಂತಿಕೆಯಿಂದ ಕೂಡಿದ ಊರು. ಇಲ್ಲಿ ಸರಿಯಾದ ರಸ್ತೆಗಳು ಇನ್ನೂ ನಿರ್ಮಾಣಗೊಂಡಿಲ್ಲ. ಜೊತೆಗೆ ಯಾವುದೇ ಸರ್ಕಾರಗಳಾಗಲೀ, ಹೆಗ್ಗಡದೇವನಕೋಟೆ ತಾಲ್ಲೂಕಿಗೆ ಹೆಚ್ಚಿನ ಅನುದಾನವನ್ನು ನೀಡುತ್ತಿಲ್ಲ. ಆದ್ದರಿಂದಲೇ ಅಭಿವೃದ್ಧಿ ಕುಂಟಿತವಾಗಿದೆ. ಕ್ಯಾತನಹಳ್ಳಿಯಲ್ಲಿ ಗ್ರಾಮಪಂಚಾಯ್ತಿ ಇದ್ದು, ಸುತ್ತಲಿನ

ಹಳ್ಳಿಗಳಿಗೆ ಇದೇ ಪಂಚಾಯ್ತಿ. ಇಲ್ಲಿ ಹಿರಿಯ ಪ್ರಾಥಮಿಕ ಶಾಲೆಯವರೆಗೆ ವ್ಯವಸ್ಥೆ ಇದ್ದು, ಪ್ರೌಢಶಾಲಾ ವಿದ್ಯಾಭ್ಯಾಸಕ್ಕೆ ಊರಿನಿಂದ ಒಂದು ಕಿಲೋಮೀಟರ್ ದೂರ ಕ್ರಮಿಸಬೇಕು. ಈ ಗ್ರಾಮವು ಒಣಪ್ರದೇಶವಾದ್ದರಿಂದ ಇಲ್ಲಿ ವ್ಯವಸಾಯಕ್ಕೆಂದೋ ಅಥವಾ ಕುಡಿಯಲಿಕ್ಕೆಂದೋ ಬೋರ್‌ವೆಲ್‌ಗಳನ್ನು ಕೊರೆಯಿಸುತ್ತಿದ್ದಾರೆ. ಆದರೆ ಅಂತರ್ಜಲ ತುಂಬಾ ಆಳದಲ್ಲಿದೆ. ಹಾಗೆಯೇ ಇಲ್ಲಿ ಹಲವಾರು ಖನಿಜ ಸಂಪನ್ಮೂಲಗಳೂ ಸಿಗುತ್ತವೆ. 'ಅವರೆಗೆರೆ ಬೆಟ್ಟ' ಹಾಗೂ ಸುತ್ತಮುತ್ತ ಚಿನ್ನದ ನಿಕ್ಷೇಪವಿದೆ ಎಂದು ಅನೇಕರು ಹೇಳುತ್ತಾರೆ. ಹಿಂದೆ ಅಂದರೆ ಎರಡು ಮೂರು ದಶಕಗಳ ಹಿಂದೆ ಇಲ್ಲಿ ಚಿನ್ನದ ನಿಕ್ಷೇಪವಿದೆ ಎಂದು ಸಂಶೋಧಿಸಿದ್ದರೆಂದು ಹಿರಿಯರು ಹೇಳುತ್ತಾರೆ. ಅವರ ಮಾತಿನ ಪ್ರಕಾರ ಇಲ್ಲಿರುವ ನಿಕ್ಷೇಪ ತುಂಬಾ ಆಳ ಪ್ರದೇಶದಲ್ಲಿದ್ದು, ಅತೀ ಕಡಿಮೆ ಪ್ರಮಾಣದಲ್ಲಿರುವುದರಿಂದ ಗಣಿಕಾರಿಕೆ ಸೂಕ್ತವಲ್ಲವೆಂದು ಸರ್ಕಾರ ಹಿಂದೆ ಸರಿಯಿತಂತೆ. ಇಲ್ಲಿ ಸುತ್ತಮುತ್ತ ಅಲ್ಪಸ್ವಲ್ಪ ಅರಣ್ಯವೂ ಇದೆ. ಆದರೆ ಕ್ಯಾತನಹಳ್ಳಿಯಿಂದ ಮೂವತ್ತು ಕಿಲೋಮೀಟರ್ ದೂರದಲ್ಲಿ ಕಾಕನಕೋಟೆ, ಬಂಡೀಪುರಗಳಂತಹ ಅಭಯಾರಣ್ಯಗಳಿವೆ. ಇದೂ ಸಹ ಭೌಗೋಳಿಕವಾಗಿ ಈ ಊರಿಗೆ, ತಾಲ್ಲೂಕಿಗೆ ಪರಿಸರದ ಸಮತೋಲನ ಕಾಪಾಡು-ವುದರಲ್ಲಿ ಪ್ರಮುಖ ಪಾತ್ರನಿರ್ವಹಿಸುತ್ತವೆ. ಬೇಸಿಗೆ ಕಾಲದಲ್ಲಿ ಕಾಡುಗಳಿಂದ ಆನೆಗಳು, ಚಿರತೆಗಳು, ಕಾಡುಹಂದಿಗಳು, ಜಿಂಕೆಗಳಂತಹ ಕಾಡುಪ್ರಾಣಿಗಳು ಕ್ಯಾತನಹಳ್ಳಿಗೂ ಸೇರಿದಂತೆ ಸುತ್ತಮುತ್ತಲಿನ ಊರುಗಳಿಗೆ ಆಹಾರ ಅರಸಿಬರುತ್ತವೆ.

ಈ ಪ್ರದೇಶದಲ್ಲಿ ಮಳೆಯ ಪ್ರಮಾಣ ಸಾಧಾರಣವಾಗಿರುತ್ತದೆ. ಮುಂಗಾರಿನ ವೇಳೆ ಭರ್ಜರಿ ಮಳೆಯಾಗುತ್ತದೆ. ಆಗ ಕೆರೆಕಟ್ಟೆಗಳೆಲ್ಲ ಭರ್ತಿಯಾಗಿ ನಂತರ ಬೇಸಿಗೆಗೆ ನೀರನ್ನು ಒದಗಿಸುತ್ತವೆ. ಊರಿನ ಅಕ್ಕಪಕ್ಕ ಕೆಂಪಯ್ಯನ ಕಟ್ಟೆ, ಪರಾನುಕಟ್ಟೆ ಮುಂತಾದ ಹಲವಾರು ವಿಸ್ತಾರವಾದ ಕೆರೆಗಳೂ ಇವೆ. ಇವುಗಳಿಂದ ಸುತ್ತಮುತ್ತಲ ವ್ಯವಸಾಯಕ್ಕೆ ಜಾನುವಾರುಗಳಿಗೆ ನೀರು ಸಿಗುತ್ತಿದೆ. ಕ್ಯಾತನಹಳ್ಳಿ ಹಾಗೂ ಸುತ್ತಮುತ್ತ ಹೆಚ್ಚಾಗಿ ಬೇವಿನ ಮರಗಳು, ಹಲಸಿನಮರಗಳು, ತೇಗದ ಮರಗಳು, ಬೀಟೆಮರಗಳು ಕಂಡುಬರುತ್ತವೆ. ಹೀಗೆ ಕ್ಯಾತನಹಳ್ಳಿಯು ಭೌಗೋಳಿಕವಾಗಿ ತನ್ನದೇ ಎಲ್ಲೆಯನ್ನು ಒಳಗೊಂಡಿದೆ. ಸುಮಾರು ಐದು ಕಿಲೋಮೀಟರ್‌ನಷ್ಟು ವಿಸ್ತಾರವಾದ ಊರಾಗಿದ್ದು, ಸಮೃದ್ಧಿಯಾದ ಜನಸಂಖ್ಯೆ, ಜಾನುವಾರುಗಳಿಂದ, ಪ್ರಾಣಿಪಕ್ಷಿಗಳಿಂದ, ಉತ್ತಮ ಪರಿಸರದಿಂದ ಕೂಡಿರುವ ಒಂದು ಗ್ರಾಮವಾಗಿದೆ ಎನ್ನಬಹುದು.

**ಸ್ಥಳನಾಮ ಪುರಾಣ, ಇತಿಹಾಸ ಮತ್ತು ಪದನಿಷ್ಪತ್ತಿ:**

ಕ್ಯಾತನಹಳ್ಳಿಗೆ ಸುಮಾರು ಶತಮಾನಗಳ ಇತಿಹಾಸವಿದೆ. ಸಂಶೋಧನೆಗಳ ಪ್ರಕಾರ ಕ್ರಿ.ಶ. ೧೦೮೬ರಲ್ಲಿ ಕ್ಯಾತನಹಳ್ಳಿ ನಿರ್ಮಾಣವಾಗಿವೆ. ಲಕ್ಷ್ಮೀಕಾಂತ ದೇವಸ್ಥಾನದ ರಂಗಮಂಟಪದ ಕಂಬದ ಬುಡದಲ್ಲಿ ಹಳ್ಳಿ ನಿರ್ಮಾಣವಾಗಿದೆ ಎಂದು ಶಾಸನಗಳ ಉಲ್ಲೇಖಗಳಲ್ಲಿದೆ. ಕ್ಯಾತನಹಳ್ಳಿಯು ಚೋಳರ ಕಾಲದಲ್ಲಿ ನಿರ್ಮಾಣ-ವಾಗಿದೆ ಎಂಬ ಉಲ್ಲೇಖಗಳಿವೆ.

ಈ ಭೂಮಿಯ ಮೇಲೆ ಪ್ರತಿಯೊಂದು ವಸ್ತುವಾಗಲೀ, ಪ್ರಾಣಿಯಾಗಲೂ, ಸ್ಥಳವಾಗಲೀ ಅವುಗಳಿಗೆ ಸಂಬಂಧಿಸಿದಂತೆ ಅದರದೇ ಆದಂತಹ ಇತಿಹಾಸವನ್ನು ಪುರಾಣವನ್ನು, ನಿಷ್ಪತ್ತಿಯನ್ನು ಹೊಂದಿರುತ್ತವೆ. ಉದಾಹರಣೆಗೆ, ಒಂದು ಊರಿನಲ್ಲಿ ಒಬ್ಬ ವ್ಯಕ್ತಿಯಿದ್ದರೆ, ಅವನ ಇತಿಹಾಸವೇನು? ಅವನು ಹೇಗೆ ಇಲ್ಲಿಗೆ ಬಂದ ಅವನ ತಂದೆ-ತಾಯಿ ಯಾರು, ಹೀಗೆ ಅವನ ವಿಷಯಗಳನ್ನು ತಿಳಿಯುವುದು ಉತ್ತಮ. ಅದೇ ರೀತಿ ಒಂದು ಹಳೆಯ ದೇವಾಲಯವಿದ್ದಾಗ, ಆ ದೇವಾಲಯ ಯಾರು ಮತ್ತು ಯಾವಾಗ ನಿರ್ಮಿಸಲಾಯಿತು. ಅದರ ಹಿನ್ನೆಲೆ ಏನು? ಎಷ್ಟು ದಿನ ಬೇಕಾಯಿತು? ಯಾರ ರಾಜನ ಆಶ್ರಯದಲ್ಲಿ ಕಟ್ಟಲ್ಪಟ್ಟಿತೆಂದು ತಿಳಿಯುವುದು ಉತ್ತಮ. ಹಾಗೆಯೇ 'ಕ್ಯಾತನಹಳ್ಳಿ - ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ಸಾಂಸ್ಕೃತಿಕ ಅಧ್ಯಯನವನ್ನು ಕೈಗೆತ್ತಿಕೊಂಡಮೇಲೆ, ಈ ಊರಿನ ಸ್ಥಳನಾಮದ ಪುರಾಣ, ಅಂದರೆ ಹೇಗೆ ಈ ಸ್ಥಳದಲ್ಲಿ ಊರು ಕಟ್ಟಲ್ಪಟ್ಟಿತು? ಯಾರಿಂದ ಕಟ್ಟಲ್ಪಟ್ಟಿತು? ಇದಕ್ಕೆ ಯಾವ ರೀತಿಯಾದ ಕೆಲಸಕಾರ್ಯಗಳನ್ನು ಕೈಗೊಂಡಿದ್ದರು? ಇದೇ ಸ್ಥಳದಲ್ಲಿ ಈ ಊರು ಕಟ್ಟಲ್ಪಡಲು ಕಾರಣವೇನು? ಎಂಬುದನ್ನು ತಿಳಿಯಬೇಕು, ಹಾಗೆಯೇ ಈ ಊರಿನ ಇತಿಹಾಸವೇನು? ಯಾವಾಗ ನಿರ್ಮಾಣವಾಯಿತು? ಎಂಬುವುದನ್ನು ಜೊತೆಗೆ ಈ ಊರಿಗೆ ಕ್ಯಾತನಹಳ್ಳಿ ಎಂದು ಹೆಸರು ಬರಲು ಕಾರಣವೇನು? 'ಕ್ಯಾತನಹಳ್ಳಿ' ಎಂಬ ಪದ ಹೇಗೆ ಕರೆಯಲ್ಪಟ್ಟಿತು? ಎಂಬಿತ್ಯಾದಿ ವಿಷಯಗಳನ್ನು ಮೊದಲು ತಿಳಿದುಕೊಳ್ಳಬೇಕು.

ಚೋಳದೇವನ ಮಗ ಅಂಕಪ್ಪ, ಮಾಚಿದೇವನ ಮಗ ಚೂಕಣ್ಣ, ಜೀಯಗೌಡನ ಮಗ ಅಂಕಪ್ಪ, ಹೊಯ್ಸಳಗೌಡನ ಮಗ ದೇವಣ್ಣರು ಸೇರಿ ಊರನ್ನು ಕಟ್ಟಿದ್ದಾರೆ. ನಮ್ಮೂರಿನವರು ಇದಕ್ಕೊಂದು ದಂತಕಥೆಯನ್ನು ಹೇಳುತ್ತಾರೆ. "ಚೋಳರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗುವ ಸಂದರ್ಭದಲ್ಲಿ ಇಲ್ಲಿನ ಕೆರೆಯನ್ನು ನೋಡಿ ಇಲ್ಲಿಯೇ ಒಂದು ರಾತ್ರಿ ತಂಗಿದ್ದು ಆ ರಾತ್ರಿಯೇ ಒಂದು ದೇವಸ್ಥಾನ ಹಾಗೂ ಊರನ್ನು ನಿರ್ಮಿಸಿದರು" ಎಂದು ಕಥೆಯನ್ನು ಹೇಳುತ್ತಾರೆ.

ಪದ ನಿಷ್ಪತ್ತಿ ಹೀಗಿದೆ: ಕೇತನಹಲಿ > ಕೇತನಹಳ್ಳಿ > ಕ್ಯಾತನಹಳ್ಳಿ

**ಸಾಮಾಜಿಕ ಜೀವನ ಮತ್ತು ಸಮುದಾಯ:**

ಯಾವುದೇ ಒಂದು ರಾಷ್ಟ್ರವಾಗಲೀ ಅಥವಾ ಒಂದು ರಾಜ್ಯವಾಗಲೀ ಅಲ್ಲಿನ ಕೆಲವೊಂದು ಪರಿಸ್ಥಿತಿಗಳ ಮೇಲೆ ರೂಪುಗೊಂಡಿರುತ್ತದೆ. ಭಾರತದಂತಹ ರಾಷ್ಟ್ರದಲ್ಲಿ ಹಳ್ಳಿಗಳೇ ಬೆನ್ನೆಲುಬಾಗಿ ನಿಂತಿವೆ. ಹಳ್ಳಿಗಳಿಂದ ಕೂಡಿದ ರಾಷ್ಟ್ರವಾಗಿರುವುದರಿಂದಲೋ ಏನೋ ವಿಶ್ವಮಟ್ಟದಲ್ಲಿ ನಮ್ಮ ರಾಷ್ಟ್ರ ಸಾಂಸ್ಕೃತಿಕವಾಗಿ ಎತ್ತರದ ಸ್ಥಾನವನ್ನು ಗಳಿಸಿಕೊಂಡಿದೆ. ಇದಕ್ಕೆಲ್ಲ ಕಾರಣವಾದ ಹಲವಾರು ಅಂಶಗಳು ಇಂದು ನಮ್ಮ ಹಳ್ಳಿಗಳಲ್ಲಿ ಇವೆ. ಅವುಗಳಲ್ಲಿ ಸಾಮಾಜಿಕ ಜೀವನ ಮತ್ತು ಸಮುದಾಯಗಳು ಸಮಾಜದಲ್ಲಿ ಜನರ ಜೀವನ ಮಟ್ಟ ಮತ್ತು ಆಯಾ ಸಮುದಾಯಗಳು ಹಳ್ಳಿಗಳ ಮೇಲೆ ಪ್ರಭಾವ ಬೀರುವುದರೊಂದಿಗೆ ಇಡೀ ರಾಜ್ಯ ರಾಷ್ಟ್ರದ ಸಾಂಸ್ಕೃತಿಕ, ಆರ್ಥಿಕ, ಸಾಮಾಜಿಕ ಅಭಿವೃದ್ಧಿಗೆ ಅಡಿಪಾಯವಾಗಿರುತ್ತವೆ. ಕ್ಯಾತನಹಳ್ಳಿಯಲ್ಲಿಯೂ ಕೂಡ ಸಾಮಾಜಿಕ ಜೀವನ, ಸಮುದಾಯಗಳು ಉತ್ತಮ ನಡೆಯನ್ನು ರೂಪಿಸಿಕೊಂಡಿವೆ.

ಕ್ಯಾತನಹಳ್ಳಿಯ ಗ್ರಾಮದಲ್ಲಿ ಹೆಚ್ಚು ಜನಸಂಖ್ಯೆ ಇದ್ದರೂ ಕೂಡ ಇಲ್ಲಿನ ಸಾಮಾಜಿಕ ಜೀವನದ ಮೇಲೆ ಯಾವುದೇ ಪರಿಣಾಮಗಳನ್ನು ಬೀರುವುದಿಲ್ಲ. ಸುಮಾರು ಏಳೆಂಟು ಜನಾಂಗದ, ವರ್ಗದ ಜನರು ಒಂದೇ ಸೂರಿನಡಿ ಅವಿಭಕ್ತ ಕುಟುಂಬದವರಂತೆ ಜೀವನ ನಡೆಸುತ್ತಿದ್ದಾರೆ. ಹಳ್ಳಿ ಎಂದಮೇಲೆ ಜನರ ಜೀವನ ಮಟ್ಟ ಅಷ್ಟೇನು ಉತ್ತಮವಾಗಿರುವುದಿಲ್ಲ ವೆಂದೇ ಅನೇಕರು ಹೇಳುತ್ತಾರೆ. ಆದರೆ ಕ್ಯಾತನಹಳ್ಳಿಯಲ್ಲಿ ಬಡವರು ಕೂಡ ಇದ್ದರೂ ಅವರ ಜೀವನವು ಅಷ್ಟೇನು ಕಳಪೆಯಿಂದ ಕೂಡಿಲ್ಲ ಎಷ್ಟೇ ಕಷ್ಟವಿದ್ದರೂ 'ಊರೇ ಒಂದು' ಎಂಬಂತೆ ಪ್ರತಿಯೊಂದು ಹಬ್ಬ ಹರಿದಿನಗಳಲ್ಲಿ ಒಬ್ಬರಿಗೊಬ್ಬರು ಸಹಕಾರಿಯಾಗಿ ನಿಲ್ಲುತ್ತಾರೆ. ಈ ಗ್ರಾಮದಲ್ಲಿ ೨೦೦೧ ಜನಗಣತಿಯ (೨೦೧೨ರ ಜನಗಣತಿಯು ಅಧಿಕೃತವಾದ ಜನಸಂಖ್ಯೆಯ ಅಂಕಿ-ಅಂಶಗಳು ಸಿಗದೇ ಇರುವುದರಿಂದ ೨೦೦೧ನ ಅಂಕಿ-ಅಂಶಗಳನ್ನೇ ಸಂಗ್ರಹಿಸಲಾಗಿದೆ.)

**೨೦೦೧ನೇ ಜನಗಣತಿ ಪ್ರಕಾರ ಕ್ಯಾತನಹಳ್ಳಿಯ ಅಂಕಿ-ಅಂಶಗಳು:**

| | |
|---|---|
| ಒಟ್ಟು ಜನಸಂಖ್ಯೆ | ೪೬೦೦ |
| ಲಿಂಗಾನುಪಾತ | (ಪು) ೧೦೦೦/೯೪೦(ಮ) |
| ಸಾಕ್ಷರತಾ ಪ್ರಮಾಣ | ೪೬.೯೩% |
| ಪುರುಷರು | ೩೦.೭೫% |
| ಮಹಿಳೆಯರು | ೧೬.೧೮% |

ಇಲ್ಲಿ ಒಟ್ಟು ೯೮೦ ಕುಟುಂಬಗಳಿದ್ದು, ೪೬೦೦ ಜನಸಂಖ್ಯೆಯನ್ನು ಹೊಂದಿದೆ. ಈ ಊರಿಗೆ ಅನೇಕ ಶತಮಾನಗಳ ಇತಿಹಾಸವಿದ್ದು, ಇಲ್ಲಿ ಕುರುಬ ಜನಾಂಗ ೪೦೦, ಪರಿಶಿಷ್ಟ ಜಾತಿ ೩೦೦, ಕುಂಬಾರ ಜನಾಂಕ ೧೮೦ ಕುಟುಂಬಗಳು, ಕಣೇರು ೭೦, ನಾಮದಾರಿಗೌಡ ಜನಾಂಗ ೧೦, ಲಿಂಗಾಯಿತರು ೩೦, ಪರಿಶಿಷ್ಟ ವರ್ಗ ೬೦, ಅಗಸರು ೨೫, ಬ್ರಾಹ್ಮಣರು ೦೪ ಕುಟುಂಬಗಳು ಕಂಡುಬರುತ್ತವೆ. ಊರಿನ ಗ್ರಾಮಪಂಚಾಯ್ತಿ ವ್ಯಾಪ್ತಿಗೆ ಇತರೆ ಹಳ್ಳಿಗಳು ಸೇರುತ್ತವೆ. ಅವುಗಳೆಂದರೆ ಶಿಂಡೇನಹಳ್ಳಿ, ಕಾಲ್ಕೊಡು, ಕೆಂಡೇಗೌಡನಪುರ, ತಂಡಸಿಪುರು, ಮಣೆಗಾರಹುಂಡಿ, ಬಣ್ಣವಾಗಿ, ಚಾಮಲಾಪುರ, ಗರಿಕೆಕಟ್ಟೆ, ಬಾಚೇಗೌಡನಹಳ್ಳಿ ಹೀಗೆ ಒಟ್ಟು ೦೮ ಊರುಗಳೂ ಸೇರಿ ಕ್ಯಾತನಹಳ್ಳಿ ಗರಾಮ ಪಂಚಾಯ್ತಿ ರಚನೆಗೊಂಡಿದೆ. ಕ್ಯಾತನಹಳ್ಳಿಯಲ್ಲಿ ಒಟ್ಟು ೨೮೦೦ ಮತಗಳಿವೆ. ಪ್ರಸ್ತುತ ಗ್ರಾಮಪಂಚಾಯ್ತಿಯು ಮೀಸಲು ಅಧ್ಯಕ್ಷ ಸ್ಥಾನ ಹೊಂದಿದ್ದು, ನಾಯಕ ಜನಾಂಗದ ಗೀತಾ ಎಂಬುವವರು ಅಧ್ಯಕ್ಷೆಯಾಗಿದ್ದು, ಸಾಮಾನ್ಯ ಸ್ಥಾನವಾದ ಉಪಾಧ್ಯಕ್ಷ ಸ್ಥಾನವನ್ನು ಬಸುವರಾಜು.ಕೆ.ಎಸ್. ಅಲಂಕರಿಸಿದ್ದಾರೆ.

ಲಕ್ಷ್ಮಿಕಾಂತ ದೇವಾಲಯವು ಚೋಳರ ಕಾಲದ ವಾಸ್ತುಶಿಲ್ಪಕ್ಕೆ ಹೋಲುವಂತಹ ದೇವಸ್ಥಾನ ಇದರಿಂದಲೇ ತಿಳಿಯುತ್ತದೆ. ಈ ದೇವಾಲಯವನ್ನು ಚೋಳರು ಕಟ್ಟಿದ್ದಾರೆಂದು, ಜೊತೆಗೆ ಇವರ ಕಾಲದಲ್ಲೇ ಈ ಊರೂ ಸಹಾ ನಿರ್ಮಾಣಗೊಂಡಿರಬೇಕೆಂದು ಅಭಿಪ್ರಾಯಪಡುತ್ತಾರೆ. ಮೇಲಿನಂತೆ ಹಿರಿಯರು ಹೇಳುವ ಪ್ರಕಾರ ದೇವಸ್ಥಾನವನ್ನು ಒಂದು ರಾತ್ರಿಯಲ್ಲಿಯೇ ನಿರ್ಮಾಣ ಮಾಡಿ ಮುಗಿಸಲು, ಆ ಕಾಲದಲ್ಲಿ ಯಾವುದೋ ಯಂತ್ರೋಪಕರಣಗಳಿಲ್ಲದಿದ್ದರೂ ಉತ್ತಮ ಕೆತ್ತನೆಗಳಿಂದ ಗಮನಸೆಳೆಯುತ್ತದೆ. ಒಂದು ರಾತ್ರಿಯಲ್ಲಿ ನಿರ್ಮಿಸಬೇಕಾದರೆ ಸಾವಿರಾರು ಜನರ ಸಹಾಯಬೇಕಾಗುತ್ತದೆ. ಇದರಿಂದಾಗಿ ಕಟ್ಟಲುಬಂದ ಜನರು ಅಲ್ಲಿಯೇ ಊರನ್ನೂ ಕಟ್ಟಿದ್ದಾರೆ ಎಂದು ಹಿರಿಯರು ಹೇಳುತ್ತಾರೆ. ಇದು ಮೌಖಿಕವಾದ ಪರಂಪರೆಯಿಂದ ಬಂದಿದ್ದರೂ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಹಸ್ತಾಂತರಹೊಂದಿ ಇಂದಿಗೂ ಇಂತಹ ಕಥೆಗಳು ಇತಿಹಾಸದ ಪ್ರತಿರೂಪವಾಗಿ ಬಾಯಲ್ಲಿ ಬರುತ್ತಿರುತ್ತವೆ. 'ಕ್ಯಾತ' ಎಂಬ ಜನರ ಗುಂಪು ಅಲೆದಾಡುತ್ತಾ ಬಂದು ಇಲ್ಲಿ ಕೆರೆ ಹಾಗೂ ದೇವಸ್ಥಾನಗಳಿದ್ದದ್ದನ್ನು ನೋಡಿ, ಇಲ್ಲಿಯೇ ನೆಲೆನಿಂತು, ಮನೆಗಳನ್ನ ಕಟ್ಟಿ, ವಾಸಿಸಲು ಆರಂಭಿಸಿದರೆಂದೂ, ವ್ಯವಸಾಯವನ್ನೂ ಆರಂಭಿಸಿದರೆಂದೂ, ಆ ಗುಂಪಿನಲ್ಲಿ 'ಕ್ಯಾತ'ನೆಂಬ ನಾಯಕನಿದ್ದುದ್ದರಿಂದಾಗಿ ಈ ಊರಿಗೆ 'ಕ್ಯಾತನಹಳ್ಳಿ' ಎಂಬ ಹೆಸರು ಬರಲು ಸಾಧ್ಯವಾಯಿತೆಂದು ಈ ಊರಿನ ಹಿರಿತಲೆಗಳು ಹೇಳುತ್ತಾರೆ. ಒಟ್ಟಿನಲ್ಲಿ ಪ್ರತಿಯೊಂದು ಊರಿಗೂ ಇದೇ ರೀತಿಯ

ಇತಿಹಾಸ, ಪುರಾಣಗಳು ಇದ್ದೇ ಇರುತ್ತವೆ. ಜೊತೆಗೆ ಊರಿನ ಹೆಸರೂ ಕೂಡ ಕಾಲದಿಂದ ಕಾಲಕ್ಕೆ ಬದಲಾಗುತ್ತದೆ. ಇದು ಪ್ರತಿಯೊಂದು ಹೆಸರಿನಲ್ಲಿಯೂ ಸಾಮಾನ್ಯವಾಗಿ ಕಂಡುಬರುವಂತಹ ಅಂಶವಾಗಿದೆ. ಕ್ಯಾತನಹಳ್ಳಿಗೆ ಹಲವಾರು ಶತಮಾನಗಳ ಇತಿಹಾಸ ಇರುವುದು ಇಲ್ಲಿನ ದೇವಸ್ಥಾನದಿಂದ ತಿಳಿಯುತ್ತದೆ. ಜೊತೆಗೆ ಊರಿನ ನಾನಾಭಾಗದಲ್ಲಿ ಶಿಲಾಶಾಸನಗಳು, ಕೆಲ ವೀರಗಲ್ಲುಗಳೂ ಸಹ ಕಂಡುಬರುತ್ತವೆ. ಅವು ದಿನದಿಂದ ದಿನಕ್ಕೆ ಸವೆಯುತ್ತಿದ್ದರೂ ಯಾವುದೇ ಒಂದು ಸಂಸ್ಥೆಯಾಗಲೀ, ವ್ಯಕ್ತಿಯಾಗಲೀ ಅವುಗಳನ್ನು ಸಂರಕ್ಷಿಸುವುದರೆಡೆಗೆ ಗಮನನೀಡಿಲ್ಲ. ಪುರಾತತ್ವ ಇಲಾಖೆಯಿಂದ ದೇವಸ್ಥಾನದ ಜೀರ್ಣೋದ್ಧಾರವಾಗಿದ್ದರೂ ಕೂಡ ಹಳೆಯ ವೈಭವಕ್ಕೆ ಮಂಕಾಗಿದೆ. ದೇವಸ್ಥಾನದ ಮೇಲಿನ ಗೋಪುರ ಹಿಂದೆ ಕಲ್ಲಿನಿಂದ ರಚನೆಯಾಗಿತ್ತು. ಆದರೆ ಅದನ್ನು ಸಿಮೆಂಟ್‌ನಿಂದ ರಚಿಸಲಾಗಿದೆ.

ಏನೇ ಇದ್ದರೂ ಕೂಡ ಈ ಊರಿಗೆ ಶತಮಾನಗಳ ಇತಿಹಾಸವಿರುವುದಂತೂ ಸತ್ಯ. ಇಲ್ಲಿನ ಸ್ಥಳಗಳು ಪ್ರೇಕ್ಷಣೀಯ ಸ್ಥಳಗಳಾಗಿಲ್ಲದಿದ್ದರೂ ಸುತ್ತಮುತ್ತಲಿನ ಜನರು ಗುರುತಿಸುವುದಂತೂ ಸತ್ಯ. ಊರಿನಲ್ಲಿ ತುಂಬಾ ಹಳೆಯದಾದಂತಹ ಅನೇಕ ಮನೆಗಳಿವೆ. ಇವೂ ಇಲ್ಲಿನ ಇತಿಹಾಸಕ್ಕೆ ಹಿಡಿದ ಕನ್ನಡಿಗಳೇ. ಆದರೆ ಅವುಗಳು ಇಂದು ವಾಸಕ್ಕೆ ಯೋಗ್ಯವಾಗಿಲ್ಲದಿರುವುದು ವಿಷಾದದ ಸಂಗತಿ.

**ಕುರುಬ ಜನಾಂಗ:** ಕ್ಯಾತನಹಳ್ಳಿಯಲ್ಲಿ ಒಟ್ಟಾರೆ ಜನಸಂಖ್ಯೆಯಲ್ಲಿ ಕುಟುಂಬವಾರು ಸಂಖ್ಯೆಯಲ್ಲಿ ಕುರುಬ ಜನಾಂಗವೇ ಮೊದಲ ಸ್ಥಾನದಲ್ಲಿದೆ. ೪೦೦ ಕುಟುಂಬಗಳಿದ್ದು, ಮಕ್ಕಳೂ ಸೇರಿದಂತೆ ಸುಮಾರು ೧೨೦೦-೧೭೦೦ ಜನಸಂಖ್ಯೆ ಹೊಂದಿದೆ. ಇವರು ಊರಿನಲ್ಲಿ ಒಂದು ಭಾಗದಂತೆ ನೆಲೆಸಿದ್ದಾರೆ. ಇವರಿಗೆ ಸಿದ್ದಪ್ಪಾಜಿ ಹಾಗೂ ಮಾರಮ್ಮ, ಲಕ್ಷ್ಮೀಕಾಂತ ದೇವರುಗಳನ್ನು ಆರಾಧಿಸುತ್ತಾರೆ. ಇವರಲ್ಲಿ ಅನೇಕರು ಒಳ್ಳೆಯ ಸರ್ಕಾರಿ ಹುದ್ದೆಗೂ ಹೋಗಿದ್ದಾರೆ. ಬಹುತೇಕರು ವ್ಯವಸಾಯ, ಕೂಲಿಯನ್ನು ಮಾಡುತ್ತಾರೆ. ಇತ್ತೀಚೆಗೆ ಯುವಕರು ಹೆಚ್ಚಾಗಿ ನಗರ ಪ್ರದೇಶಗಳಿಗೆ ಕೆಲಸಕ್ಕಾಗಿ ಹೋಗಿಬರುತ್ತಿದ್ದಾರೆ. ಇದರಿಂದ ಜೀವನ ಮಟ್ಟ ಸುಧಾರಣೆ ಕಾಣುತ್ತಿದೆ.

**ಪರಿಶಿಷ್ಟ ಜಾತಿ:** ಕುರುಬ ಜನಾಂಗದ ನಂತರ ಎರಡನೇ ಸ್ಥಾನದಲ್ಲಿರುವುದು ಪರಿಶಿಷ್ಟ ಜಾತಿ. ಇದು ಸುಮಾರು ೩೦೦ ಕುಟುಂಬಗಳನ್ನು ಒಳಗೊಂಡಿದೆ. ಅತ್ಯಂತ ಹಿಂದುಳಿದ ಜನಾಂಗವೆಂದು ಕರೆಯಲ್ಪಡುತ್ತದೆ. ಇವರಲ್ಲಿಯೂ ಅನೇಕರು ಒಳ್ಳೆಯ ಸರ್ಕಾರಿ ಕೆಲಸಕ್ಕೆ ಹೋಗಿದ್ದರೂ, ಅಷ್ಟಾಗಿ ಸುಧಾರಿಸಿಲ್ಲ. ಇಲ್ಲಿ ಸುಮಾರು ೧೦೦೦ ರಿಂದ ೧೨೦೦ ರಷ್ಟು ಜನಸಂಖ್ಯೆ ಕಂಡುಬರುತ್ತದೆ. ಮುಖ್ಯ ಕಸುಬು ಕೂಲಿ, ಸಣ್ಣ

ಪುಟ್ಟ ವ್ಯಾಪಾರ, ಇವರು ಹೊಂದಿರುವ ಭೂಮಿಯೂ ಕಡಿಮೆಯಿದ್ದರೂ ಅದರಲ್ಲಿಯೇ ಕೆಲವರು ವ್ಯವಸಾಯ ಮಾಡುತ್ತಿದ್ದಾರೆ.

**ಕುಂಬಾರ ಜನಾಂಗ:** ಜನಸಂಖ್ಯೆಯಲ್ಲಿ ಮೂರನೇ ಸ್ಥಾನದಲ್ಲಿದ್ದಾರೆ. ಇವರು ೧೦೦ ಕುಟುಂಬಗಳನ್ನು ಹೊಂದಿದ್ದಾರೆ. ೪೦೦ ರಿಂದ ೬೦೦ರಷ್ಟು ಜನಸಂಖ್ಯೆ ಇದ್ದು, ಮುಖ್ಯ ಕಸುಬು ಮಡಿಕೆ ಮಾಡುವುದು, ಕೃಷಿ ಕೆಲಸಕಾರ್ಯಗಳನ್ನು ಕೈಗೊಳ್ಳುವುದು ಮುಖ್ಯವಾಗಿ ಕಂಡುಬರುತ್ತದೆ. ವ್ಯಾಪಾರ, ವ್ಯವಸಾಯದಿಂದಾಗಿ ಇವರ ಕಸುಬನ್ನೇ ಅನೇಕರು ಬಿಟ್ಟಿದ್ದಾರೆ. ಬೆರಳೆಣಿಕಯಷ್ಟು ಕುಟುಂಬಗಳು ಮಾತ್ರ ಮೂಲ ಕಸುಬನ್ನೇ ಮುಂದುವರೆಸಿದ್ದಾರೆ.

**ಲಿಂಗಾಯಿತರು:** ಕ್ಯಾತನಹಳ್ಳಿಯಲ್ಲಿ ಸುಮಾರು ೩೦ ಕುಟುಂಬಗಳು ಇವೆ. ಸುಮಾರು ೨೦೦ ರಿಂದ ೩೦೦ ರಷ್ಟು ಜನಸಂಖ್ಯೆ ಇದೆ. ಇಲ್ಲಿ ಅನೇಕರು ಒಳ್ಳೆಯ ಹುದ್ದೆಗಳಿಗೆ ಹೋಗಿದ್ದಾರೆ. ಆದರೆ ೩೦೦ ಇತ್ತೀಚೆಗೆ ಈ ಕುಟುಂಬದವರು ನಗರಕ್ಕೆ ವಲಸೆ ಹೋಗುವುದು ಹೆಚ್ಚಾಗಿ ಕಂಡುಬರುತ್ತಿದೆ. ಇವರು ಹೆಚ್ಚಾಗಿ ಮಹದೇಶ್ವರ ಹಾಗೂ ಮಾರಮ್ಮ ದೇವರನ್ನು ಪೂಜಿಸುತ್ತಾರೆ. ಈ ಜನಾಂಗದ ಶಿವಣ್ಣ, ನಿಂಗಪ್ಪಣ್ಣ ಎಂಬುವವರು ಮಹದೇಶ್ವರನ ದೇವಸ್ಥಾನದಲ್ಲಿ ಅರ್ಚಕರಾಗಿದ್ದಾರೆ.

**ಪರಿಶಿಷ್ಟ ವರ್ಗ:** ಇವರು ಸುಮಾರು ೬೦ ಕುಟುಂಬಗಳಿದ್ದು, ೨೦೦ ರಇಂದ ೨೫೦ ರಷ್ಟು ಜನಸಂಖ್ಯೆ ಇದೆ. ಇವರಲ್ಲಿ ಒಂದು ಕುಟುಂಬವಿದೆ. ಆ ಕುಟುಂಬವೇ ನಮ್ಮೂರಿನಲ್ಲಿ 'ಮಾರಮ್ಮನ ಹಬ್ಬದ ದಿನ' 'ಎರ್ಚ್‌ಗುಳಿ' ಎಂಬ ಸಂಪ್ರದಾಯವನ್ನು ಹಲವಾರು ತಲೆಮಾರುಗಳಿಂದ ನಡೆಸಿಕೊಂಡು ಬರುತ್ತಿದ್ದಾರೆ. ಇವರ ಮುಖ್ಯ ಕಸುಬು ಕೃಷಿ, ಕೂಲಿ, ಕೆಲವರು ಸರ್ಕಾರಿ ಹುದ್ದೆಗಳಿಗೆ ಹೋಗಿದ್ದಾರೆ.

**ಅಗಸರು:** ಸುಮಾರು ೨೫ ಕುಟುಂಬಗಳಿವೆ. ಸುಮಾರು ೩೦೦ ರಿಂದ ೪೦೦ ಜನಸಂಖ್ಯೆ ಇದೆ. ನಮ್ಮೂರಿನ ಬಹುತೇಕ ಎಲ್ಲಾ ವರ್ಗದ ಜನರ ಬಟ್ಟೆ ಬರೆಗಳನ್ನು ಶುಚಿಗೊಳಿಸುತ್ತಾರೆ. ಮೊದಲು ಅವರೇ ಹೇಳುವಂತೆ ಕತ್ತೆಗಳನ್ನು ಇಟ್ಟುಕೊಂಡಿದ್ದರಂತೆ ಆದರೆ ಇತ್ತೀಚೆಗೆ ಅವರಲ್ಲಿ ಹೆಚ್ಚು ಜನ ಅವರ ಮೂಲ ಕಸುಬನ್ನು ಬಿಟ್ಟು ನಗರಕ್ಕೆ ಉದ್ಯೋಗ ಹರಸಿ ಹೋಗುತ್ತಿದ್ದಾರೆ. ಇಂದು ಹುಡುಕಿದರೆ ಒಬ್ಬರೂ ತಮ್ಮ ಮೂಲ ಕಸುಬನ್ನು ಮುಂದುವರೆಸುತ್ತಿಲ್ಲ. ಈ ಗ್ರಾಮ ಸಮುದಾಯದ ಎಲ್ಲಾ ಜನಾಂಗದ ಬಹುತೇಕ ಇಂದಿನ ಯುವಜನಾಂಗವು ತಮ್ಮ ಮೂಲ ಕಸುಬನ್ನು ತೊರೆದು ಆಧುನಿಕತೆಯ ಸ್ಪರ್ಶದಿಂದಾಗಿ ನಗರಗಳ ಕಡೆ ಕೆಲಸಕ್ಕಾಗಿ ಹರಸಿ ಹೋಗುತ್ತಿದ್ದಾರೆ.

ಮಿಕ್ಕ ಬ್ರಾಹ್ಮಣ ಜನಾಂಗ ಹಾಗೂ ಇತರ ಜನಾಂಗದವರೂ ಸಹ ಕೃಷಿ, ವ್ಯಾಪಾರವನ್ನು ಅವಲಂಬಿಸಿಕೊಂಡಿದ್ದಾರೆ. ಒಟ್ಟಾರೆ ಕ್ಯಾತನಹಳ್ಳಿಯ ಜನರು ಹೆಚ್ಚಾಗಿ ಉದ್ಯೋಗ ಹರಸಿ ನಗರಕ್ಕೂ ಹೋಗುತ್ತಿದ್ದು, ಕೆಲವರು ನಗರದಲ್ಲಿಯೇ ವಾಸಿಸುತ್ತಿದ್ದಾರೆ.

ನಮ್ಮೂರಿನ ಗ್ರಾಮ ಪಂಚಾಯ್ತಿಗೆ ಒಳಪಡುವ ಚಾಮಲಾಪುರ ದಲ್ಲಿಯೇ ಉಷ್ಣವಿದ್ಯುತ್ ಸ್ಥಾವರವನ್ನು ಸ್ಥಾಪಿಸಲು ಸಿ.ಎಂ. ಯಡಿಯೂರಪ್ಪನವರು ಭೂಸ್ವಾಧೀನ ಮಾಡಲು ಸರ್ಕಾರಕ್ಕೆ ತಿಳಿಸಿದಾಗ ಅನೇಕ ಹೋರಾಟಗಳಿಂದಾಗಿ ಇಲ್ಲಿ ಸ್ಥಾಪನೆಯಾಗಬೇಕಿದ್ದ ವಿದ್ಯುತ್ ಸ್ಥಾವರ ಸ್ಥಳಾಂತಗೊಂಡಿದ್ದು ಇತ್ತೀಚಿನ ದಿನಗಳಲ್ಲಿ ಕುತೂಹಲ ಕೆರಳಿಸಿದ್ದ ಸಂಗತಿ.

ಇಲ್ಲಿನ ಜನರು ಹೆಚ್ಚಾಗಿ ಕೃಷಿಯನ್ನು ಅವಲಂಬಿಸಿರುವವರು, ಇಲ್ಲಿ ಶೇಕಡ ೬೦ಕ್ಕಿಂತಲೂ ಹೆಚ್ಚಿನವರು ಕೃಷಿಯನ್ನೇ ಜೀವನಕ್ಕೆ ಆಧಾರವಾಗಿಸಿಕೊಂಡಿದ್ದಾರೆ. ಇವರು ಸಾಮಾಜಿಕವಾಗಿ ಉತ್ತಮ ಬಾಂಧವ್ಯವನ್ನೂ ಇಟ್ಟುಕೊಂಡಿರುವುದು ಇತರೆ ಹಳ್ಳಿಗಳಿಗೆ ಆದರ್ಶವಾಗಿ ಕಾಣುತ್ತದೆ. ಸಾಮಾಜಿಕವಾಗಿ ಎಲ್ಲಾ ಸೌಲಭ್ಯಗಳನ್ನೂ ಹೊಂದಿದ್ದಾರೆ. ನಮ್ಮೂರಿನಲ್ಲಿ ಬಹುತೇಕ ಎಲ್ಲಾ ವರ್ಗದ ಜನರೂ ಇರುವುದರಿಂದ ಕೆಲವೊಮ್ಮೆ ಅಹಿತಕರ ಘಟನೆಗಳು ನಡೆದರೂ ಅವು ಕೇವಲ ಕೆಲವು ಗಂಟೆಯ ಕಾಲದ್ದಾಗಿರುತ್ತದೆ. ಇಲ್ಲಿ ವಿವಿಧತೆಯಲ್ಲಿ ಏಕತೆಯನ್ನು ಕಾಣಬಹುದಾಗಿದೆ. ಇಲ್ಲಿನ ಜನರು ಹೆಚ್ಚಾಗಿ ಮೈಸೂರು ನಗರಕ್ಕೂ ಕೆಲಸಕ್ಕಾಗಿ ಹೋಗುತ್ತಾರೆ. ಮೈಸೂರು ತುಂಬಾ ಹತ್ತಿರದಲ್ಲಿ ಇರುವುದರಿಂದ ಕೆಲಸಕ್ಕೆ ಹೋಗುತ್ತಾರೆ. ಹೆಗ್ಗಡದೇವನಕೋಟೆ ಹಿಂದುಳಿದ ತಾಲ್ಲೂಕು ಎಂಬ ಹಣೆಪಟ್ಟಿ ಧರಿಸಿದ್ದು ಕ್ಯಾತನಹಳ್ಳಿಯೂ ಅದರೊಂದು ಭಾಗವಾಗಿರುವುದರಿಂದ ಇಲ್ಲಿಯೂ ಸಹ ಬಡತನ ಯಥೇಚ್ಛವಾಗಿ ಕಾಣಸಿಗುತ್ತದೆ. ಸಾಮಾಜಿಕವಾಗಿ ಹಿಂದುಳಿದ ಜನಾಂಗಗಳೇ ಹೆಚ್ಚಾಗಿದ್ದು, ಇವರು ದಿನಗೂಲಿಗಾಗಿ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದಾರೆ. ಇಲ್ಲಿಯೂ ಕೂಡ ಜಾತಿ–ವರ್ಗ, ಸಂಘರ್ಷಗಳು, ಜಾತಿ ಪದ್ಧತಿ ಕಂಡುಬಂದರೂ ಅಷ್ಟೇನೂ ಹೆಚ್ಚಾಗಿರುವುದಿಲ್ಲ.

ಕ್ಯಾತನಹಳ್ಳಿಯು ವಿವಿಧತೆಯಲ್ಲಿ ಏಕತೆಯನ್ನು ಗಳಿಸಿರುವ ಹಳ್ಳಿ, ಒಂದು ಜಾತ್ಯಾತೀತವಾದಂತಹ ಗ್ರಾಮ. ದೇಶದ ಬೆನ್ನೆಲುಬೇ ಇಂತಹ ಹಳ್ಳಿಗಳು. ಇಂತಹ ಹಳ್ಳಿಗಳ ಅಭಿವೃದ್ಧಿಗೆಂದೇ ಸರ್ಕಾರಗಳು, ಸಂಘಸಂಸ್ಥೆಗಳು ಹಲವಾರು ಯೋಜನೆಗಳನ್ನು ಅನುಷ್ಠಾನಕ್ಕೆ ತಂದಿವೆ, ತರುತ್ತಲೇ ಇವೆ. ಇಲ್ಲಿನ ಸಮುದಾಯವು ಕೋಮುಸೌಹಾರ್ದತೆಯಿಂದ ಕೂಡಿದೆ. ನಮ್ಮ ಸ್ವಂತ ಊರಾದ್ದರಿಂದ ಹಾಗೂ

ಇಲ್ಲಿಯೇ ಹುಟ್ಟಿ ಬೆಳೆದಿರುವುದರಿಂದ ಇಲ್ಲಿನ ಸಾಮಾಜಿಕ ವಾತಾವರಣ, ಸಮುದಾಯದ ಪರಿಸರ ಇತರೆ ಹಳ್ಳಿಗಳಷ್ಟು ಕಳಪೆಯಾಗಿಲ್ಲವೆಂದು ಹೇಳಬಹುದು. ಇದು ಒಂದು ವ್ಯವಸ್ಥಿತವಾದ ಹಳ್ಳಿ, ಹಿಂದೆ ಹಳ್ಳಿ ಕಟ್ಟುವವರು ಯೋಜನೆ ಮಾಡಿಕೊಂಡೇ ಕಟ್ಟಿದ್ದಾರೆ. ಎಲ್ಲಾ ವರ್ಗದ ಜನರಿಗೂ ಪ್ರತ್ಯೇಕವಾಗಿ ಇರಲು ಬೀದಿಗಳ ವ್ಯವಸ್ಥೆ ಇದೆ. ಇನ್ನು ಇಲ್ಲಿ 'ಮುಂದುವರಿದ ಶಿಕ್ಷಣಕೇಂದ್ರ'ವೂ ಸ್ಥಾಪನೆಗೊಂಡು ಇಲ್ಲಿನ ಹಿರಿಯ ಅನಕ್ಷರಸ್ಥರಿಗೆ ಅಕ್ಷರ ಕಲಿಸುವ ಕೆಲಸ ಮಾಡುತ್ತಿದೆ ಹಾಗೂ ಈ ಕೇಂದ್ರದಲ್ಲಿ ಗ್ರಂಥಾಲಯವೂ ಇದ್ದು, ಹಲವಾರು ಉಪಯುಕ್ತ ಪುಸ್ತಕಗಳ ಲಭ್ಯತೆ ಇದೆ. ವಿದ್ಯಾವಂತ ಯುವಕರು, ಯುವತಿಯರು ಈ ಕೇಂದ್ರಕ್ಕೆ ಹೋಗಿ ವಿಷಯ ಅರಿಯುತ್ತಾರೆ. ಜೊತೆಗೆ ದೈನಂದಿನ ಪತ್ರಿಕೆಗಳನ್ನೂ ಇಲ್ಲಿ ತರಿಸುವುದರಿಂದ ರಾಜ್ಯದ, ರಾಷ್ಟ್ರದ, ಅಂತರರಾಷ್ಟ್ರೀಯ ವಿದ್ಯಮಾನಗಳನ್ನು ತಿಳಿದುಕೊಳ್ಳಲು ಸಹಾಯಕವಾಗಿದೆ. ಇಲ್ಲಿ ಅಂಗನವಾಡಿಯೂ ಇದೆ. ಇಲ್ಲಿ ಚಿಕ್ಕಮಕ್ಕಳಿಗೆ ಶಾಲೆಗೆ ಸೇರಿಸುವುದಕ್ಕೂ ಮುಂಚೆ ಪೂರ್ವ ವಿದ್ಯಾಭ್ಯಾಸವನ್ನು ಹೇಳಿಕೊಡಲಾಗುತ್ತದೆ. ಇಲ್ಲಿ ಸಮುದಾಯಭವನ, ಮದುವೆ ಮಂಟಪವೂ ಇದೆ. ಆದರೆ ಹೆಚ್ಚಾಗಿ ಕಾರ್ಯಕ್ರಮಗಳು ನಡೆಯುವುದಿಲ್ಲ.

ಇಲ್ಲಿನ ಸಮುದಾಯದಲ್ಲಿ ರಾಜಕೀಯವಾಗಿ ನೋಡುವುದಾದರೆ, ಇಲ್ಲಿ ಜನರು ಎಲ್ಲಾ ಪಕ್ಷಗಳಿಗೂ ಬೆಂಬಲನೀಡುತ್ತಾರೆ. ಆದರೆ ಹೆಚ್ಚಾಗಿ ರಾಷ್ಟ್ರೀಯ ಪಕ್ಷಕ್ಕೆ ತಮ್ಮ ಮತ ಚಲಾಯಿಸುತ್ತಾರೆ. ಈ ವಿಧಾನ ಸಭೆಯ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದಿಂದ ಎಂ.ಎಲ್.ಎ. ಆಗಿ ಆಯ್ಕೆಯಾಗಿದ್ದಾರೆ. ಈ ಊರಿನಲ್ಲಿ ಜನಸಂಖ್ಯೆ ಹೆಚ್ಚಿರುವುದರಿಂದ ಚುನಾವಣೆಗಳ ಸಂದರ್ಭಗಳಲ್ಲಿ ಚುನಾವಣ ಚಟುವಟಿಕೆಗಳು, ಪ್ರಚಾರಗಳು ತುಸು ಜೋರಾಗಿಯೇ ಘರ್ಜಿಸುತ್ತವೆ. ಕೆಲವೊಮ್ಮೆ ಪಕ್ಷಗಳ ಕಾರ್ಯಕರ್ತರ ನಡುವೆ ಮಾತಿನ ಚಕಮಕಿ, ಘರ್ಷಣೆಗಳೂ ನಡೆದಿರುವುದುಂಟು. ಆದರೆ ಊರಿನಲ್ಲಿ ನಡೆಯುವ ಯಾವುದೇ ಕಾರ್ಯಕ್ರಮಗಳಲ್ಲಿ, ಹಬ್ಬ-ಹರಿದಿನಗಳಲ್ಲಿ ಎಲ್ಲರೂ ಒಟ್ಟಾಗಿ ಭಾಗವಹಿಸುತ್ತಾರೆ. ಅಣ್ಣತಮ್ಮಂದಿರಂತೆ ಕೆಲಸಕಾರ್ಯಗಳಲ್ಲಿ ತೊಡಗಿಕೊಳ್ಳುತ್ತಾರೆ. ಜೊತೆಗೆ ಈ ಸಮುದಾಯದಲ್ಲಿ, ಶೈಕ್ಷಣಿಕವಾಗಿಯೂ ಅಭಿವೃದ್ಧಿಹೊಂದುತ್ತಿರುವುದು ಮತ್ತೊಂದು ವಿಶೇಷ ಸಂಗತಿಯಾಗಿದೆ. ವಿದ್ಯಾವಂತರು ಹೆಚ್ಚಾದಂತೆ ಸಮಾಜದಲ್ಲಿ ಬದಲಾವಣೆಯ ಗಾಳಿ ಬೀಸಲಾರಂಭಿಸುತ್ತಿದೆ. ಸರ್ಕಾರಿ ಉದ್ಯೋಗಸ್ಥರು ಹೆಚ್ಚಾದಂತೆ ಆರ್ಥಿಕವಾಗಿ ಜನರು ಸದೃಢರಾಗುತ್ತಿದ್ದಾರೆ ಎನ್ನಬಹುದು. ಇಲ್ಲಿ ವ್ಯವಸಾಯವನ್ನು ನೆಚ್ಚಿಕೊಂಡ ಜನರೇ ಹೆಚ್ಚಾಗಿ ಕಂಡುಬರುತ್ತಾರೆ. ಇವರು ತಮ್ಮ ಬಳಿ ಜಮೀನು ಇಲ್ಲದಿದ್ದರೂ, ಜಮೀನು ಇರುವವರ ಬಳಿ ಗುತ್ತಿಗೆಯಾಗಿ ಅಥವಾ ವಾರಕ್ಕಾಗಿ

ಜಮೀನುಗಳನ್ನು ಪಡೆದು ವ್ಯವಸಾಯ ಮಾಡಿ ಜೀವನ ಸಾಗಿಸುತ್ತಿದ್ದಾರೆ. ಇಲ್ಲಿ ಎಲ್ಲಾ ವರ್ಗದ ಜನರೂ ಇರುವುದರಿಂದ ಪ್ರತಿಯೊಂದು ಕೆಲಸವನ್ನೂ ಈ ಊರಿನ ಜನರೇ ಮಾಡುತ್ತಾರೆ, ಮರದ ಕೆಲಸಗಳಿದ್ದರೆ ಇಲ್ಲಿನ ಮರಗೆಲಸದ ಆಚಾರಿಗಳೇ ಮಾಡುತ್ತಾರೆ. ಚಿನ್ನದ ಕೆಲಸಗಳಿದ್ದರೆ, ಚಿನ್ನದ ಆಚಾರಿಗಳು ಮಾಡುತ್ತಾರೆ. ಹೀಗೆ ಪ್ರತೀ ಕೆಲಸಕಾರ್ಯಗಳಿಗೆ ಇಲ್ಲಿನ ಜನರು ನಗರಕ್ಕೇ ಹೋಗುವ ಅನಿವಾರ್ಯ ಕಡಿಮೆಯಿದ್ದು, ಪ್ರತೀ ಅನಿವಾರ್ಯತೆಗಳನ್ನು ಇಲ್ಲಿನ ಕೆಲಸಗಾರರೇ ಪೂರೈಸುತ್ತಿದ್ದಾರೆ.

# ಅಧ್ಯಾಯ –೩

# ಸಂಪ್ರದಾಯಗಳು, ಆಚರಣೆಗಳು ಮತ್ತು ನಂಬಿಕೆಗಳು

ಮನುಷ್ಯನು ತನ್ನ ಬದುಕಿನೊಂದಿಗೆ ದೈವತ್ವದ ನಂಬಿಕೆಯನ್ನು ಇಟ್ಟುಕೊಂಡು ಬದುಕುತ್ತ ಜೀವನ ನಡೆಸುತ್ತಿದ್ದಾನೆ. ಭಾರತೀಯ ಸಂಸ್ಕೃತಿ ಯಲ್ಲಿ ಪುಣ್ಯಾರ್ಜನೆಯು ಆಚರಣೆಗಾಗಿ ಅನುಸರಿಸು ಧಾರ್ಮಿಕ ವಿಧಿ–ವಿಧಾನಗಳು ಹಲವಾರು. ಇವುಗಳಿಗೆಲ್ಲ ಪುರಾಣ ಮತ್ತು ಐತಿಹ್ಯಗಳೇ ಕಾರಣವಾಗಿದೆ. ಮನುಷ್ಯ ಗ್ರಾಮದೇವತೆಗಳನ್ನು ನಂಬಿ ಪ್ರಾಕೃತಿಕ ವಿಕೋಪದಿಂದ ಪಾರಾಗಲು ರೋಗರುಜಿನಗಳಿಂದ, ದಾರಿಕೋರರಿಂದ ಪಾರಾಗಲು ಹಲವಾರು ಆಚರಣೆಗಳನ್ನು ಕಂಡುಕೊಂಡಿದ್ದಾನೆ. ದೇವರನ್ನು ಒಲಿಸಿಕೊಳ್ಳಲು ಮತ್ತು ಸಂತೃಪ್ತಿ ಗೊಳಿಸಲು ಹರಿಕೆ, ಹರಿಸೇವೆಗಳಲ್ಲಿ ವೈವಿಧ್ಯಮಯವಾದ ಆಚರಣೆ ಮತ್ತು ನಂಬಿಕೆಗಳನ್ನು ರೂಪಿಸಿಕೊಂಡು ಆಶ್ಚರ್ಯಚಕಿತರನ್ನಾಗಿ ಮಾಡಿದ್ದಾನೆ. 'ಒಂದು ಸಮಾಜವು ಪರಂಪರಾಗತ ವಾಗಿ ಅನುಸರಿಸುತ್ತಾ ಬಂದಿರುವ ಧಾರ್ಮಿಕ ಚಟುವಟಿಕೆಗಳನ್ನು ಸಂಪ್ರದಾಯ' ಎಂದು ಕರೆಯುತ್ತಾರೆ.

ಇಂತಹ ಧಾರ್ಮಿಕ ಆಚರಣೆಗಳನ್ನು ಕಾರ್ಯರೂಪಕ್ಕೆ ತರುವುದೇ 'ಆಚರಣೆಗಳಾ'ಗುತ್ತವೆ. ಒಂದು ಹೇಳಿಕೆ ಅಥವಾ ವಸ್ತುಸ್ಥಿತಿಯ ಬಗ್ಗೆ ಮಾನಸಿಕ ಒಪ್ಪಿಗೆಯನ್ನು ತೋರುವ ಪ್ರವೃತ್ತಿಯನ್ನು ನಂಬಿಕೆಗಳೆಂತಲೂ ಕರೆಯಬಹುದಾಗಿದೆ. ಇಂತಹ ಸಂಪ್ರದಾಯಗಳು, ಆಚರಣೆಗಳು ಮತ್ತು ನಂಬಿಕೆಗಳು ಪ್ರತಿಯೊಂದು ಹಳ್ಳಿಗಳಲ್ಲೂ, ಪ್ರತೀ ಮನೆಗಳಲ್ಲೂ ಇದ್ದೇ ಇರುತ್ತವೆ. ಏಕೆಂದರೆ ಇಂತಹ ಅಂಶಗಳ ಮೇಲೆಯೇ ಜನಪದರ, ಹಳ್ಳಿಗರ ಜೀವನ ನಿಂತಿರುವುದು. ಇಂತಹ ಅಂಶಗಳು ಇಲ್ಲದೇ ಇದ್ದಿದ್ದರೆ ಇಂದು ಹಳ್ಳಿಗಳೇ ಇರುತ್ತಿರಲಿಲ್ಲ. ದೇವರು, ನಂಬಿಕೆ, ವಿಶ್ವಾಸ, ಭಯ–ಭಕ್ತಿಗಳಂತಹ ಮೌಲ್ಯಗಳೇ ಇಲ್ಲದೆ ಯಾಂತ್ರೀಕೃತ ಜೀವನದಲ್ಲಿ ಹುಟ್ಟಿ, ಬೆಳೆದು, ಬದುಕಿ, ಕೊನೆಗೊಮ್ಮೆ ಮರಣಹೊಂದುತ್ತಿದ್ದರಷ್ಟೇ ಹುಟ್ಟಿದ ಮೇಲೆ ಮನುಷ್ಯ ಏನಾದರೂ ಸಾಧಿಸಿಹೋಗಬೇಕು, ಹುಟ್ಟಿದ ಜೀವವನ್ನು ಬದುಕಿನಲ್ಲಿ ಸಾರ್ಥಕ ಮಾಡಿಕೊಳ್ಳುವುದೂ ಪ್ರತಿಯೊಬ್ಬನ ಕರ್ತವ್ಯವೂ ಹೌದು.

ಗ್ರಾಮೀಣ ಪ್ರದೇಶಗಳಲ್ಲೆಲ್ಲಾ ಇಂತಹ ನಂಬಿಕೆಗಳಿಗೆ ತುಂಬಾ ಗೌರವವನ್ನು ನೀಡುತ್ತಾರೆ. ತಮ್ಮ ನಿತ್ಯಜೀವನದಲ್ಲಿ ಎಲ್ಲವೂ ಸುಸೂತ್ರವಾಗಿ ಸಾಗಲೀ, ಯಾವುದೇ ಕಷ್ಟಗಳು, ರೋಗರುಜಿನಗಳು, ಕೆಟ್ಟಸ್ಥಿತಿಗಳು ಬಾರದಿರಲೆಂದು ಊರಿನ ದೇವರುಗಳಿಗೆ ಹರಕೆ ಕಟ್ಟಿಕೊಳ್ಳುತ್ತಾರೆ. ದೇವರುಗಳನ್ನು ಬೇಡಿಕೊಳ್ಳುತ್ತಾರೆ, ಪ್ರಾರ್ಥಿಸಿಕೊಳ್ಳುತ್ತಾರೆ.

ಊರಿನ ಹೊರಭಾಗದಲ್ಲಿ ಅವರಗೆರೆಬೆಟ್ಟ ಎಂದು ಒಂದು ದೈವೀ ಸ್ಥಳವಿದೆ. ಅಲ್ಲಿಗೆ ವರ್ಷಕ್ಕೊಮ್ಮೆ ವೀರಶೈವ ಕುಟುಂಬಗಳು ಹಿಂದಿನ ದಿನ ರಾತ್ರಿಹೋಗಿ ಅಲ್ಲಿಯೇ ತಂಗಿದ್ದು ಬೆಳಿಗ್ಗೆ ಎದ್ದು ದೇವರಿಗೆ ಪೂಜಿಸಿ 'ಪರ'ವನ್ನು ಮಾಡಿ, ಎಲ್ಲರೂ ಪ್ರಸಾದವನ್ನು ಸ್ವೀಕರಿಸುತ್ತಾರೆ. 'ಪರ' ಎಂದರೆ 'ಎಲ್ಲಾ ಕುಟುಂಬಗಳು ಅಕ್ಕಿ, ದವಸಧಾನ್ಯಗಳನ್ನು ಸಂಗ್ರಹಿಸಿಕೊಂಡು ಬೆಟ್ಟದ ಮೇಲೆ ಅಡುಗೆಮಾಡಿಕೊಂಡು, ಅದನ್ನು ದೇವರಿಗೆ ನೈವೇದ್ಯಮಾಡಿ ನಂತರ ಎಲ್ಲರೂ ಸಾಮೂಹಿಕ ಭೋಜನಮಾಡಿ ಅಂದು ರಾತ್ರಿ ಊರಿಗೆ ವಾಪಾಸ್ಸಾಗುತ್ತಾರೆ. ಇದೂ ಕೂಡ ಈ ಗ್ರಾಮದ ಜನರ ಆಚರಣೆ, ನಂಬಿಕೆ, ಸಂಪ್ರದಾಯಗಳಾಗಿವೆ. ಊರಿಗೆ ಮಳೆಯಾಗದಿದ್ದಾಗ, ಊರಿನವರೆಲ್ಲಾ ಸೇರಿ ದೇವರಿಗೆ ಪೂಜಿಸುತ್ತಾರೆ. ಇಲ್ಲಿಯವರೆಗೆ ಏನು ಭಕ್ತಿಯೋ ಏನೋ, ಆ ದಿನ ಪರ ನಡೆಯುವ ವೇಳೆ ಸ್ವಲ್ಪವಾದರೂ ಮಳೆ ಬರುತ್ತದೆ. ಇದನ್ನು ಅವರು ಶ್ರದ್ಧೆಯಿಂದ ಮಾಡುತ್ತಾರೆ. ಮಾರಿಹಬ್ಬದಂದು ಕುರಿ ಬಲಿಕೊಟ್ಟು ಅದರ ರಕ್ತವನ್ನು ದೇವರಿಗೆ ನೈವೇದ್ಯಮಾಡಿದ ಅನ್ನಕ್ಕೆ ಬೆರೆಸಿ, ಇಡೀ ಊರಿನ ಬೀದಿಗಳಿಗೆಲ್ಲ ಅದರ ಎರಚುವಿಕೆ ನಡೆಯುತ್ತದೆ. ಇದರಿಂದ ಊರಿಗೆ ಯಾವುದೇ ಆಪತ್ತು-ವಿಪತ್ತು, ಪ್ರಕೃತಿ ವಿಕೋಪಗಳು ಸಂಭವಿಸುವುದಿಲ್ಲವೆಂದು ನಂಬಿಕೊಂಡಿದ್ದಾರೆ. ಪ್ರತೀ ಮನೆಯ ಬಾಗಿಲಿಗೆ ಅದನ್ನು ಎರಚುವುದರಿಂದ ಆ ಮನೆಗೆ ಯಾವುದೇ ಕೆಟ್ಟ ಶಕ್ತಿಗಳ ಪ್ರವೇಶವಾಗುವುದಿಲ್ಲವೆಂದು ನಂಬಿಕೆಯಿಂದ ಪ್ರತೀವರ್ಷ ಇಂತಹ ಆಚರಣೆಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆ.

ಕ್ಯಾತನಹಳ್ಳಿಯಲ್ಲಿ ಒಂದು 'ರಾಮಮಂದಿರ'ವೂ ಇದ್ದು, ಇಲ್ಲಿ ಪೂಜೆ ಕೆಲವೊಂದು ವಿಶೇಷ ದಿನಗಳಲ್ಲಿ ಮಾತ್ರ ನಡೆಯುತ್ತದೆ. ಇಲ್ಲಿ ಹೆಚ್ಚಾಗಿ ನಾಟಕಗಳ ಅಭ್ಯಾಸವನ್ನು ಮಾಡುತ್ತಾರೆ. ಜೊತೆಗೆ 'ಅಯ್ಯಪ್ಪನ ಭಕ್ತರು' ಅಯ್ಯಪ್ಪನ ಮಾಲೆಯನ್ನು ಹಾಕಿಸಿಕೊಂಡಾಗ ಅವರು ಇಷ್ಟುದಿನ ಮನೆಯಿಂದ ದೂರ ಇರಬೇಕೆಂದು ಕಟ್ಟುಪಾಡುಗಳನ್ನು ಆಚರಿಸುತ್ತಾರೆ. ಇಂತಹ ದಿನಗಳನ್ನು 'ರಾಮಮಂದಿರ'ದಲ್ಲಿ ಕಳೆಯುತ್ತಾರೆ. ಇವರು ಶಬರಿಮಲೆಗೆ ಹೋಗುವವರೆಗೂ ಇಲ್ಲಿಯೇ ಪ್ರತೀದಿನ ಮಲಗುತ್ತಾರೆ, ಸ್ನಾನ, ಮಡಿಗಳನ್ನು ಲಕ್ಷ್ಮಿಕಾಂತ ದೇವಾಲಯದ ಬಳಿ ಇರುವ ಬಾವಿಯಲ್ಲಿ ಮುಂಜಾನೆಯೇ ಮಾಡಿಕೊಳ್ಳುತ್ತಾರೆ. ಇಂತಹವೆಲ್ಲವೂ ಅವರ ಆಚರಣೆಗಳಾಗಿರುವಂತವು, ಇದರಿಂದ ತಮಗೆ ಒಳ್ಳೆಯದಾಗುತ್ತದೆಂಬ ನಂಬಿಕೆಗಳನ್ನು ಇಟ್ಟುಕೊಂಡು ದೇವರಲ್ಲಿ ಎಲ್ಲವನ್ನೂ ಕಾಣುತ್ತಾರೆ. ಇಲ್ಲಿ ಮತ್ತೊಂದು ನಂಬಿಕೆಯು ಗಮನಸೆಳೆಯುತ್ತದೆ. ದೀಪಾವಳಿ ಹಾಗೂ ಯುಗಾದಿ ಹಬ್ಬದ ರಾತ್ರಿ ಹಾಲರವಿ, ನಂದಿಕಂಭ, ಜೊತೆಗೆ ಮೂವರು 'ಹಲಗೆ ಕಟ್ಟಿರು'ವವರು ಉತ್ಸವ ನಡೆಯುತ್ತದೆ. ಈ

ಉತ್ಸವ ಲಕ್ಷ್ಮಿಕಾಂತ ದೇವಸ್ಥಾನದ ಬಳಿಯ ಬಾವಿಯಿಂದ ಆರಂಭವಾಗಿ ಊರಿನ ಪ್ರಮುಖ ಬೀದಿಗಳಲ್ಲಿ ಉತ್ಸವ ನಡೆದು ಕೊನೆಗೆ ಮಹದೇಶ್ವರ ದೇವಸ್ಥಾನಕ್ಕೆ ತಲುಪುತ್ತದೆ. ಇಂತಹ ಸಂದರ್ಭದಲ್ಲಿ ಮೂರು ಜನ ಭಕ್ತರು, ಮಹದೇಶ್ವರ, ಸಿದ್ಧಪ್ಪಾಜಿ, ಲಕ್ಷ್ಮಿಕಾಂತ ದೇವರ ವಿಗ್ರಹಗಳನ್ನು ಹೊತ್ತು ನಡೆಯುವಾಗ, ಊರಿನ ಬಹುತೇಕರ ಅವರು ನಡೆಯುವ ನೆಲದ ಮೇಲೆ ಮಲಗಿ, ಹಲಗೆ ಕಟ್ಟಿರುವವರು ಇವರನ್ನು ದಾಟಿಕೊಂಡು ಹೋದಾಗ ಇವರಿಗೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆಯನ್ನು ಹಿಂದಿನಿಂದಲೂ ಬೆಳೆಸಿಕೊಂಡಿದ್ದಾರೆ. ಇಂತಹ ಆಚರಣೆಗಳು, ನಂಬಿಕೆಗಳು, ಸಂಪ್ರದಾಯಗಳು ಯಾವಾಗ ಹುಟ್ಟಿಕೊಂಡವೆಂದು ಯಾರಿಗೂ ತಿಳಿದಿಲ್ಲ. ಈಗಿರುವವರು ಹಿಂದಿನವರಿಂದ ಬಳುವಳಿಯಾಗಿ ಪಡೆದಿದ್ದಾರೆ ಎನ್ನಬಹುದು. ಒಬ್ಬರನ್ನು ಇನ್ನೊಬ್ಬರು ನೋಡಿ ಅನುಸರಿಸುವುದರಿಂದಲೇ ಇಂತಹ ಅಂಶಗಳು ಹಳ್ಳಿಗಳಲ್ಲಿ ಅತಿ ಹೆಚ್ಚಾಗಿ ಇಂದಿಗೂ ಚಾಲ್ತಿಯಲ್ಲಿರುವುದು ತಿಳಿಯದ ವಿಷಯವೇನಲ್ಲ. ಇವೆಲ್ಲವೂ ಜಾನಪದ ಸಂಸ್ಕೃತಿಗೆ ಒಳಪಟ್ಟಿರುತ್ತವೆ. ಜಾನಪದ ಕಲೆಗಳು, ಒಗಟುಗಳು, ಗಾದೆಗಳು, ಗೀತೆಗಳು, ಕಥೆಗಳು ಮೌಖಿಕವಾಗಿ ತಲೆಮಾರಿನಿಂದ ತಲೆಮಾರಿಗೆ ಹರಿದುಬರುವಂತೆ ಈ ಸಂಪ್ರದಾಯಗಳು, ಆಚರಣೆಗಳು ಮತ್ತು ನಂಬಿಕೆಗಳೂ ಕೂಡ ತಲೆಮಾರಿನಿಂದ ತಲೆಮಾರಿಗೆ ಹರಿದುಬಂದಂತಹವಾಗಿವೆ.

ಇಲ್ಲಿರುವ ಮಹದೇಶ್ವರ, ಸಿದ್ದಪ್ಪಾಜಿ, ಮಾರಮ್ಮ, ಗುಂಡುಮಾರಮ್ಮ ದೇವರುಗಳಲ್ಲಿ ಕ್ಯಾತನಹಳ್ಳಿ ಗ್ರಾಮದ ಜನರು ತುಂಬಾ ನಂಬಿಕೆಗಳನ್ನಿಟ್ಟಿದ್ದಾರೆ. ಇಲ್ಲಿನ ಎಲ್ಲಾ ವರ್ಗದ ಜನಾಂಗದವರೂ ಎಲ್ಲಾ ದೇವರಲ್ಲಿಯೂ ನಂಬಿಕೆಗಳನ್ನಿಟ್ಟು ಪೂಜೆ, ಸಂಪ್ರದಾಯಗಳು, ಆರಾಧನೆಗಳು ಹರಕೆಗಳನ್ನು ನೆರವೇರಿಸುತ್ತಾರೆ. ಮಹದೇಶ್ವರ ದೇವರನ್ನು 'ಮಾದಪ್ಪ' ಎಂದೇ ಕರೆಯುತ್ತಾರೆ. ದೀಪಾವಳಿ ಹಬ್ಬದಲ್ಲಿ ಮಾದಪ್ಪನ ಜಾತ್ರೆ ಅದ್ದೂರಿಯಾಗಿ ನಡೆಯುತ್ತದೆ. ಅಲ್ಲಿ ಹುವಾನರವನ್ನು ಹೊತ್ತರೆ ಯಾವ ಕಷ್ಟಗಳೂ ಆವರಿಸುವುದಿಲ್ಲ ಎಂಬ ನಂಬಿಕೆಯಿದೆ. ಕೊಂಡವನ್ನು ಹಾಯುವ ಸಂಪ್ರದಾಯವಿದೆ. ದೀಪಾವಳಿ ಹಬ್ಬದ ಹಿಂದಿನ ದಿನ ಗ್ರಾಮದ ಸುತ್ತಮುತ್ತಲ ಊರಿನ ಜನರು ಸೌದೆಯನ್ನು ದಿಮ್ಮಿಯನ್ನು ಎತ್ತುಗಳ ಮೂಲಕ ಕಟ್ಟಿ ದೇವಸ್ಥಾನ ಬಳಿ ಕೊಂಡದ ಗುಳಿಗೆ ತುಂಬಿ ಅದನ್ನು ಬೇಯಿಸಿ ಉರಿದ ಮೇಲೆ ಕೆಂಡದ ಮೇಲೆ ನಡೆಯುವ ಒಂದು ಸಂಪ್ರದಾಯವಾಗಿದೆ. ಹಾಗೆಯೇ ಜನರು ದೇವರಿಗೆ ಹೂವನ್ನು ಒಪ್ಪಿಸಿ ಹೂ ಕೇಳುವ ಪದ್ಧತಿಯೂ ಇದೆ. ಇವರ ಪ್ರಕಾರ ಭಕ್ತಾದಿಗಳು 'ತಾವು ತಮ್ಮ ಮನಸ್ಸಿನಲ್ಲಿ ಕೇಳಬೇಕೆಂದಿರುವ ವಿಚಾರಗಳನ್ನು ಸ್ಮರಿಸಿಕೊಂಡು ಅದು ಆಗುತ್ತದೆ ಎಂದು ಕೇಳಿದರೆ ಶುಭವಾಗುತ್ತದೆ ಎಂಬುದಕ್ಕೆ ಬಲಭಾಗದಲ್ಲೂ, ಇಲ್ಲವೇ ಅದು ದೇವರಿಗೆ

ಅಸಮಾಧಾನ ಎನ್ನುವುದಕ್ಕೆ ಎಡಭಾಗಲದ್ಲೂ ನೀಡುತ್ತದೆ' ಎಂಬ ನಂಬಿಕೆಯಿದೆ. ಹಾಗೆಯೇ ತಮ್ಮ ಇಷ್ಟಗಳು ಈಡೇರುವಂತೆ ಮಾಡಿದರೆ ದೇವರಿಗೆ ಹರಕೆ ಕೊಡುವುದಾಗಿ ಕೇಳಿಕೊಳ್ಳುವ ಪದ್ಧತಿ ಇದೆ. ಅದರಲ್ಲೂ ಹೆಚ್ಚಿನ ಜನ ಕುರಿ, ಕೋಳಿ, ಮೇಕೆ ಬಲಿಕೊಡುವ ಹರಕೆ ಮಾಡಿಕೊಳ್ಳುವವರ ಸಂಖ್ಯೆ ಅಧಿಕ. ಇಲ್ಲಿ ದೇವರು ಮೈಮೇಲೆ ಬಂದು ಜನರಿಗೆ ಧೈರ್ಯ ಸ್ಥೈರ್ಯ ನೀಡುವುದರ ಜೊತೆಗೆ ಪ್ರಗತಿಪರ ಆಶಯಗಳನ್ನು ನೀಡುತ್ತದೆ.

ಈ ಗ್ರಾಮದ ಜನರಿಗೆ ರೋಗರುಜಿನಗಳು ಬಂದರೆ ಅಥವಾ ಬಾರದಂತೆ ತಡೆಯಲು ಮಾದಪ್ಪನ ತೀರ್ಥವನ್ನು ಕುಡಿಸುತ್ತಾರೆ. ಇದರಿಂದ ಯಾವುದೇ ಬಾದೆಗಳು ಬರುವುದಿಲ್ಲ ಎಂಬ ನಂಬಿಕೆ ಸಂಪ್ರದಾಯಗಳಿವೆ. ಜನಪದರಲ್ಲಿ ನಂಬಿಕೆಗಳು, ಸಂಪ್ರದಾಯಗಳು ಮತ್ತು ಆಚರಣೆಗಳು ವ್ಯಕ್ತಿಗತವಾದವು. ಇವು ವ್ಯಕ್ತಿಯಿಂದ ವ್ಯಕ್ತಿಯಲ್ಲಿ ಭಿನ್ನವಾಗಿರುತ್ತವೆ. ಜನಾಂಗದಿಂದ ಜನಾಂಗಕ್ಕೂ ಕೂಡ ಭಿನ್ನತೆಯನ್ನು ಗುರುತಿಸಬಹುದು. ಮನುಷ್ಯರು ತಮ್ಮ ಕಷ್ಟ ಸುಖಗಳಿಗಾಗಿ ಕಷ್ಟದ ಪರಿಹಾರಕ್ಕಾಗಿ ಮತ್ತು ಸಂತಾನ ಅಪೇಕ್ಷೆಗಾಗಿ, ಸಂಬಂಧಗಳು ಬೆಳವಣಿಗೆಗಾಗಿ ಮತ್ತು ಶತ್ರುನಾಶಕ್ಕಾಗಿ ಹರಕೆಗಳನ್ನು ಹೊರುತ್ತಾನೆ. ಜೊತೆಗೆ ವ್ಯವಸಾಯದಲ್ಲಿ ಫಸಲು ಉತ್ತಮವಾಗಿರಲೆಂದು ಶುಭ ಕಾರ್ಯಗಳು ಯಾವುದೇ ವಿಘ್ನವಿಲ್ಲದೆ ನಡೆಯಲೇಂದು ಹರಕೆಯನ್ನು ಹೆಚ್ಚಿನ ಜನರು ಮಾಡಿಕೊಳ್ಳುತ್ತಾರೆ. ಜೊತೆಗೆ ಮುಡಿಕೊಡುವುದು, ವಿಶೇಷ ಪೂಜೆ ಏರ್ಪಡಿಸುವುದು, ಬಲಿಕೊಡುವುದು ದೇವರ ಹೆಸರಿನಲ್ಲಿ ಅನ್ನ ಸಂತರ್ಪಣೆ, ದೇವಸ್ಥಾನಕ್ಕೆ ಕಾಣಿಕೆಗಳನ್ನು ನೀಡುವುದು ಮುಂತಾದ ಮೂಲಕ ಹರಕೆಗಳನ್ನು ತೀರಿಸುತ್ತಾರೆ. ಪ್ರತಿ ತಿಂಗಳು ಮಾದಪ್ಪನ ಸನ್ನಿದಾನದಲ್ಲಿ 'ಅಮಾವಾಸ್ಯೆ ಪೂಜೆ ಮಾಡಿ ಅನ್ನಸಂತರ್ಪಣೆ ನಡೆಯುತ್ತದೆ. ಇದಕ್ಕೆ ಹಲವಾರು ಭಕ್ತರ ಕಾಣಿಕೆಯು ಉಂಟು. ಕೆಲವರು ಹರಕೆ ಕಟ್ಟಿಕೊಂಡೂ ಇದನ್ನು ನೆರವೇರಿಸುತ್ತಾರೆ.

ಆಚರಣೆಗಳಲ್ಲಿ ಮುಖ್ಯವಾಗಿ ಹಬ್ಬಗಳು ಮತ್ತು ಜಾತ್ರೆಗಳು ಕಂಡುಬರುತ್ತವೆ. ಕ್ಯಾತನಹಳ್ಳಿಯಲ್ಲಿ ಪ್ರಮುಖವಾಗಿ ದೀಪಾವಳಿ, ಶಿವರಾತ್ರಿ, ಗೌರಿ–ಗಣೇಶ, ಯುಗಾದಿ, ಮಾರಿಹಬ್ಬ, ಸಂಕ್ರಾಂತಿ ಹಬ್ಬಗಳನ್ನು ಅದ್ದೂರಿಯಾಗಿ ಆಚರಿಸುತ್ತಾರೆ. ಇವುಗಳಲ್ಲಿ ಅತಿ ಮುಖ್ಯವಾಗಿರುವ ಹಬ್ಬಗಳೆಂದರೆ ದೀಪಾವಳಿ ಮತ್ತು ಮಾರಿಹಬ್ಬ.

ಕ್ಯಾತನಹಳ್ಳಿಯಲ್ಲಿ ದೀಪಾವಳಿ ಹಬ್ಬವು ಮೂರು ದಿನಗಳ ಕಾಲ ನಡೆಯುವ ಅದ್ದೂರಿ ಹಬ್ಬವಾಗಿದೆ. ಮೊದಲನೇ ದಿನ ಅಮಾವಾಸ್ಯೆ. ಆ ದಿನ ಮಡಕೆ ಹೊಡೆಯುವ ಆಚರಣೆ, ಅಂದರೆ ಹಳೆ ಮಡಕೆಗಳು, ಗಡಿಗೆಗಳನ್ನು ತಮಗಿಷ್ಟ

ಬಂದವರ ಮನೆಯ ಒಸ್ತಿಲಿಗೆ ಹೊಡೆಯುತ್ತಾರೆ. ಅಂದೇ ರಾತ್ರಿ ಯಾರ್‍ಯಾರ ಮನೆಯ ಹಿತ್ತಲಲ್ಲಿ, ಹೊಲಗಳಲ್ಲಿ ಸಿಗುವ ಮರದ ಸೌದೆ, ದಿಮ್ಮಿ, ತುಮಡುಗಳನ್ನು, ಹಿತ್ತಲಿನ ಬಾಗಿಲುಗಳನ್ನು ಎತ್ತಿನಗಾಡಿ ಚಕ್ರಗಳು, ನೊಗಗಳನ್ನು ಕದ್ದು, ಊರಿನ ಪ್ರಮುಖ ರಸ್ತೆಗಳು ಸೇರವು ಜಾಗಗಳಲ್ಲಿ ಶೇಖರಿಸಿ ಕಿಚ್ಚು ಹತ್ತಿಸಿ ಅದರ ಸುತ್ತ ಸಂಭ್ರಮಿಸುತ್ತಾರೆ. ಇದೂ ಒಂದು ಸಂಪ್ರದಾಯವೇ ಆಗಿದೆ. ಅದು ವಾರಗಟ್ಟಲೇ ಉರಿಯುವುದೂ ಉಂಟು. ನಂತರ ಎರಡನೇ ದಿವಸ ಹಬ್ಬವಿರುತ್ತದೆ. ಆ ದಿನ ಬೆಳಿಗ್ಗೆಯಿಂದಲೇ ನೆಂಟರಿಷ್ಟರು ಬರುವುದು ಹೆಚ್ಚು. ಸಿಹಿತಿಂಡಿಗಳನ್ನು ಮಾಡಿ ಭಕ್ಷ್ಯ ಭೋಜನಗಳನ್ನು ಸವಿಯುತ್ತಾರೆ. ಆ ದಿನದ ಮಧ್ಯಾಹ್ನದಿಂದಲೇ "ಕೊಂಡ ದೇವರು" ಬರುವುದಕ್ಕೂ ಆರಂಭವಾಗುತ್ತದೆ (ಚಿತ್ರವನ್ನು ಕೊನೆಯ ಪುಟದಲ್ಲಿ ಗಮನಿಸಬಹುದು). ಅಂದರೆ ಸುತ್ತಮುತ್ತಲಿನ ಗ್ರಾಮಗಳ ಜನರು ತಮ್ಮ ಹರಕೆಯನ್ನು ತೀರಿಸಲು ಜೊತೆಗೆ ಸಂತೋಷಪಡಲು ತಮ್ಮ ಎತ್ತುಗಳನ್ನು ಸಿಂಗರಿಸಿ ನೊಗಕ್ಕೆ ಕಟ್ಟಿಗೆಯನ್ನು ಕಟ್ಟಿ ಊರಿನ ತುಂಬ ಎಳೆಸಿಕೊಂದು ಹೋಗುತ್ತಾರೆ. ಆ ಕಟ್ಟಿಗೆಗಳನ್ನು ಮಾದೇಶ್ವರ ದೇವಸ್ಥಾನದ ಬಳಿ ಇಳಿಸುತ್ತಾರೆ. ಕಡಿಮೆ ಎಂದರೂ ೫ ರಿಂದ ೬ ಸಾವಿರ 'ಕೊಂಡದೇವರು' ಬರುತ್ತವೆ.

ಅಂದು ರಾತ್ರಿ ಲಕ್ಷ್ಮೀಕಾಂತ ದೇವಸ್ಥಾನದ ಬಳಿಯ ಬಾವಿಯಲ್ಲಿ ಪೂಜೆ ಸಲ್ಲಿಸಿ ಅಲ್ಲಿಂದ 'ಮೈ ನೆರೆಯದ ಐದು ಹೆಣ್ಣುಮಕ್ಕಳು 'ಆಲರವಿಯನ್ನು ಹೊತ್ತು ಜೊತೆಗೆ ಮೂವರು ಪುರುಷರು 'ಹಲಗೆ' ಕಟ್ಟುತ್ತಾರೆ. ಹಲಗೆ ಕಟ್ಟುಗವುದೆಂದರೆ ಹಬ್ಬದ ಮೂರನೇ ದಿನ ಮಹದೇಶ್ವರನ ಸನ್ನಿದಾನದಲ್ಲಿ ನಡೆಯುವ ಕೊಂಡ ಹಾಯುವ ಮೂರು ಭಕ್ತರು ತಮ್ಮೊಂದಿಗೆ ತೆಗೆದುಕೊಂಡು ಹಾಯುವ ದೇವರುಗಳ ಮೂರ್ತಿಗಳನ್ನು, ಹಬ್ಬದ ಎರಡನೇ ದಿನ ರಾತ್ರಿ ನಡೆಯುವ ಈ ಉತ್ಸವದಲ್ಲಿ ಇತರ ಮೂವರು ಭಕ್ತರು ಬಾವಿಯಿಂದ ಹೊತ್ತು ಮಾದಪ್ಪನ ದೇವಸ್ಥಾನಕ್ಕೂ ಹೋಗುತ್ತಾರೆ. ಇದನ್ನು ಇಲ್ಲಿ ಹಲಗೆ ಕಟ್ಟುವುದು ಎಂದು ಕರೆಯಲಾಗುತ್ತದೆ. ಹಲಗೆ ಕಟ್ಟಿ, ಆಲರವಿಹೊತ್ತು ನಡೆಯುವಾಗ ಮತ್ತೊಬ್ಬ ಹರಕೆಹೊತ್ತ ಭಕ್ತರು ಸಿದ್ಧಪ್ಪಾಜಿ ದೇವರನ್ನು ಹೊತ್ತು ಮೆರವಣಿಗೆಯಲ್ಲಿ ನಡೆಯುತ್ತಾರೆ. ಒಟ್ಟಾಗಿ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ನಡೆಯಿಸಿ ಮಧ್ಯರಾತ್ರಿ ಎರಡು ಗಂಟೆಗೆ ಮಹದೇಶ್ವರ ದೇವಸ್ಥಾನವನ್ನು ತಲುಪುತ್ತಾರೆ. ಅಲ್ಲಿ ಮಾದಪ್ಪನಿಗೆ ಪೂಜೆ ಸಲ್ಲಿಸಿ, ನಂತರ ಅಲ್ಲಿರುವ ಕಪ್ಪಿಗೆ ಸೌದೆಯನ್ನು ಕೊಂಡದ ಜಾಗಕ್ಕೆ ಜೋಡಿಸುತ್ತಾರೆ. ಅದು ಸುಮಾರು ಇಪ್ಪತ್ತೆರಡು ಹೆಜ್ಜೆ ದೂರ, ಹತ್ತು ಅಡಿ ಎತ್ತರ, ಮೂರು ಅಡಿ ಅಗಲವಿರುತ್ತದೆ. ಅದಕ್ಕೆ ಯಾವುದೇ ಎಣ್ಣೆಹಾಕದೆ, ಕೇವಲ ಕರ್ಪೂರದಿಂದಲೇ ಹೊತ್ತಿಸುತ್ತಾರೆ. ಮಾರನೆ ದಿನ

ಕೊನೆಯದಿನ ಅಂದುಕೊಂಡ ಹಾಯುವ, ಜಾತ್ರೆಯ ದಿನ ದೊಡ್ಡದಾದ ಜಾತ್ರೆಯೇ ನಡೆಯುತ್ತದೆ. ದೂರದೂರದ ಊರುಗಳಿಂದ, ನಗರಗಳಿಂದ ವ್ಯಾಪಾರಸ್ಥರೂ ಬಂದು ಇಲ್ಲಿ ಅಂಗಡಿಮುಂಗಟ್ಟುಗಳನ್ನು ತೆರೆಯುತ್ತಾರೆ. ಕೊಂಡವನ್ನು ಒಟ್ಟು ಮೂರು ದೇವರುಗಳು ಹಾಯುತ್ತಾರೆ. ಅಂದರೆ ಮಹದೇಶ್ವರ, ಲಕ್ಷ್ಮಿಕಾಂತ ಮತ್ತು ಸಿದ್ದಪ್ಪಾಜಿ ದೇವರ ವಿಗ್ರಹಗಳನ್ನು ಹೊತ್ತಿಕೊಂಡು ಮೂವರು ಪುರುಷರು ಹಾಯುತ್ತಾರೆ. ಹಾಯುವಂತ ಈ ಮೂವರೂ ಭಕ್ತರೂ ಕೂಡ ಎರಡು ದಿನಗಳಿಂದ ತುಂಬಾ ಕಟ್ಟುನಿಟ್ಟಿನ ನಿಯಮಾವಳಿಗಳಿಂದ ಇರುತ್ತಾರೆ. ನಂತರ ಹರಕೆ ಹೊತ್ತವರು ಆ ಕೊಂಡಕ್ಕೆ ಎಳ್ಳು, ಗಂಧದಕಡ್ಡಿ, ಎಣ್ಣೆ ಸುರಿಯುತ್ತಾರೆ. ನಂತರ ಹರಕೆ ತೀರಿಸುವುದು, ಮುಡಿ ಕೊಡಿಸುವುದು ನಡೆಯುತ್ತದೆ. ಸುಮಾರು ೨೦,೦೦೦ಕ್ಕಿಂತಲೂ ಹೆಚ್ಚು ಜನರು ಈ ಜಾತ್ರೆಗೆ ಸೇರುತ್ತಾರೆ. ಈ ಜಾತ್ರೆಯ ದಿನ ವಿಶೇಷವಾಗಿರುವ ಹುಲಿವಾನರದ ಸೇವೆಯ ಜೊತೆಗೆ ಹರಕೆಯೂ ನಡೆಯುತ್ತದೆ.

ಗ್ರಾಮದ ಮತ್ತೊಂದು ಮುಖ್ಯವಾದ ಹಬ್ಬವೆಂದರೆ 'ಮಾರಿಹಬ್ಬ' ಊರ ಕಾಯುವವಳೇ ಮಾರಿ. ಊರಿಗೆ ಯಾವ ಕೇಡೂ ಆಗದಂತೆ ರಕ್ಷಣೆ ಒದಗಿಸಲು, ನಮ್ಮೂರಿನಲ್ಲಿ ಮಾರಮ್ಮ ಊರಿನ ಕೊನೆಯಲ್ಲಿ ನೆಲೆಸಿದ್ದಾಳೆ. ಏಕೆಂದರೆ ಇಲ್ಲಿನ ಜನರೇ ಹೇಳುವಂತೆ 'ಊರ ಮುಂದೆ ಮಾದಪ್ಪ ಕಾವಲು ಕಾದರೆ, ಊರ ಹಿಂದೆ ಮಾರಮ್ಮ ಕಾವಲು ಕಾಯುತ್ತಾಳೆ' ಎಂಬ ಪ್ರತೀತಿ ಇದೆ. ಮಾರಮ್ಮನ ಹಬ್ಬದ ದಿವಸ 'ಮಾರಿಗುಡಿ'ಗೆ ಎಲ್ಲಾ ವರ್ಗದ ಜನರೂ ಹೋಗಿ ಪೂಜೆ, ಹರಕೆ ತೀರಿಸುತ್ತಾರೆ ಆದರೆ ಇಲ್ಲಿ ಪ್ರಮುಖವಾಗಿ ಕಾಣುವ ಅಂಶವೆಂದರೆ "ಎರ್ಚ್‌ಗುಳಿ". ಅಂದರೆ ಮಾರಮ್ಮನಿಗೆ ಊರಿನ ದುಡ್ಡಿನಿಂದಲೇ ಒಂದು ಮೇಕೆಯನ್ನು ಬಲಿಕೊಟ್ಟು, ಅದರ ರಕ್ತವನ್ನು ಅನ್ನಕ್ಕೆ ಕಲಸಿ ಅದನ್ನು ಮಾರಿಗುಡಿಯ ಮುಂದೆ ನಾಲ್ಕೂ ದಿಕ್ಕಿಗೂ ಒಮ್ಮೊಮ್ಮೆ ಎರಚಿ, ನಂತರ ಊರಿನ ಎಲ್ಲಾ ಬೀದಿಗಳಿಗೂ ಓಡುತ್ತಾ ಅದನ್ನು ಎರಚುತ್ತಾರೆ. ಅಂದರೆ ಈ ರೀತಿ ಮಾಡಿದರೆ ಯಾವ ರೀತಿಯ ಕೇಡೂ, ಯಾವ ಮನೆಗೂ ತಗಲುವುದಿಲ್ಲ ಎಂಬ ನಂಬಿಕೆ ಅನೇಕ ಶತಮಾನಗಳಿಂದಲೂ ಆಚರಣೆಯಲ್ಲಿದೆ. ಜೊತೆಗೆ ಅದನ್ನು ಎರಚುತ್ತಾ ಹೋಗುವವರ ಹಿಂದೆ ಮಕ್ಕಳು, ದೊಡ್ಡವರು ಓಡುವುದು ಒಂದು ವಿಶೇಷ. ನಾನೂ ಕೂಡ ಅವರ ಹಿಂದೆ ಅನೇಕ ಬಾರಿ ಓಡಿ ಸುಸ್ತಾಗಿದ್ದೇನೆ. ಈ ಒಂದು ಆಚರಣೆಯನ್ನು ನಾಯಕ ಜನಾಂಗದ 'ಚಿಕ್ಕಣ್ಣ' ಎಂಬುವವರ ಕುಟುಂಬ ಹಲವಾರು ದಶಕಗಳಿಂದ ಮಾಡಿಕೊಂಡು ಬಂದಿದ್ದಾರೆ. ಇವುಗಳಷ್ಟೇ ಅಲ್ಲದೆ ಸಂಕ್ರಾಂತಿಯನ್ನೂ ಇಲ್ಲಿ ತುಂಬಾ ಅದ್ದೂರಿಯಾಗೇ ಆಚರಿಸುತ್ತಾರೆ. ಜೊತೆಗೆ ಲಕ್ಷ್ಮೀಕಾಂತನ ಪೂಜೆ, ಕಲ್ಲು ಬಸವನ ಪೂಜೆಯೂ ಸಹ ಮುಖ್ಯವಾಗಿ ಕಂಡುಬರುತ್ತವೆ.

ಕ್ಯಾತನಹಳ್ಳಿಯಲ್ಲಿ ಶವಸಂಸ್ಕಾರ ಪದ್ಧತಿಯೂ ವಿಶಿಷ್ಟವಾಗಿದೆ. ಹೂಳುವುದು, ಸುಡುವುದು, ಜೊತೆಗೆ ನಿರ್ಜನ ಪ್ರದೇಶದಲ್ಲಿ ಶವಗಳನ್ನಿಟ್ಟು ಬರುವುದು, ಹೊಳೆಗಳಲ್ಲಿ ಕಲ್ಲು ಕಟ್ಟಿ ಮುಳುಗಿಸುವ ಪದ್ಧತಿಗಳು ಕಂಡುಬರುತ್ತದೆ. ಆದರೆ ಜನರೇ ಹೇಳುವಂತೆ ಸದ್ಯಕ್ಕೆ ಹೂಳುವುದು ಮತ್ತು ಸುಡುವ ಪದ್ಧತಿಗಳು ಮಾತ್ರ ಇವೆ. ಮಿಕ್ಕ ಪದ್ಧತಿಗಳು ಶತಮಾನಗಳ ಹಿಂದೆಯೇ ಸ್ಥಗಿತಗೊಂಡಿವೆಯಂತೆ. ಇಲ್ಲಿ ಎಲ್ಲಾ ವರ್ಗದ ಜನರಲ್ಲೂ ಒಂದೇ ಶವಸಂಸ್ಕಾರ ಪದ್ಧತಿ ಇದೆ. ಆದರೆ ಆತ್ಮಹತ್ಯೆ ಮತ್ತು ಇಳಿ ವಯಸ್ಸಿನಲ್ಲೇ ಮರಣ ಹೊಂದಿದರೆ ಬಹುತೇಕ ಎಲ್ಲಾ ಜನಾಂಗದವರೂ ಶವವನ್ನೂ ಸುಡುತ್ತಾರೆ. ಇಲ್ಲವಾದಲ್ಲಿ ಮಣ್ಣಲ್ಲಿ ಹೂಳುತ್ತಾರೆ. ಲಿಂಗಾಯತ ಜನಾಂಗ, ಕುರುಬ ಜನಾಂಗ, ಬ್ರಾಹ್ಮಣ ಜನಾಂಗದಲ್ಲಿ ಶವವನ್ನು ಕೂರಿಸಿ ಮೆರವಣಿಗೆ ಮೂಲಕ ಅಂತ್ಯ ಸಂಸ್ಕಾರ ಮಾಡಿದರೆ, ಮಿಕ್ಕ ಜನಾಂಗದಲ್ಲಿ ಶವವನ್ನು ಮಲಗಿಸಿ ಮೆರವಣಿಗೆ ಮಾಡಿ ಅಂತ್ಯಸಂಸ್ಕಾರ ಮಾಡುತ್ತಾರೆ.

ಈ ಊರಿನಲ್ಲಿ ಅನೇಕ ನಂಬಿಕೆಗಳಲ್ಲಿ ಆಚರಣೆಗಳಲ್ಲಿ ನಾವು ಮುಡಿ ಕೊಡುವುದು, ಧೂಪದ ಸೇವೆ, ಉರುಳು ಸೇವೆ, ಹೂಲಿವಾನರ ಹೊರುವುದು, ಬಲಿಕೊಡುತ್ತೇವೆಂಬ ಹರಕೆ ಕಟ್ಟಿಕೊಳ್ಳುವುದನ್ನು ನೋಡಬಹುದು. ದೇವರನ್ನು ತೃಪ್ತಿಪಡಿಸಲು ಹಾಗೂ ತಾವು ಅಂದುಕೊಂಡದ್ದು ನೆರವೇರಿದಾಗ ತಾವು ಮಾಡಿಕೊಂಡಿದ್ದ ಹರಕೆಗಳನ್ನು ತೀರಿಸುತ್ತಾರೆ.

೧) **ಮುಡಿ ಕೊಡುವುದು:** ಮಾನವ ನಿರ್ಮಿಸಿರುವ ಪ್ರತಿಯೊಂದು ದೇವರಿಗೆ ಮುಡಿಕೊಡುವ ಪದ್ಧತಿಯು ಬೆಳೆದುಕೊಂಡು ಬಂದಿದೆ. ಸಂಪತ್ತು ಇರುವ ಜನ ತಮಗೆ ಬೇಕಾದ ವಸ್ತುಗಳನ್ನು ಕೊಡಲು ಸಿದ್ಧರಿರುತ್ತಾರೆ. ಆದರೆ ಬಡತನದಲ್ಲಿ ಇರುವ ಜನರು ದೇವರಿಗೆ ಏನನ್ನು ಕೊಡಲು ಸಾಧ್ಯವಿಲ್ಲವಾದ್ದರಿಂದ ತಮ್ಮ ತಲೆಯ ಕೂದಲನ್ನು ದೇವರಿಗೆ ನೀಡುವುದಾಗಿ ಹರಕೆ ಕಟ್ಟಿಕೊಳ್ಳುತ್ತಾರೆಂಬ ಮಾತು ಈ ಹರಕೆ ಹಿಂದಿನ ಸತ್ಯವೆಂದೂ ಹೇಳುತ್ತಾರೆ. ಇದಕ್ಕೆ ವೈಜ್ಞಾನಿಕ ಕಾರಣವನ್ನೂ ನೋಡಬಹುದು. ಹಿಂದೆ 'ಅಮ್ಮ' ಎಂಬ ಗಾಯ ತಲೆಗೆ ಆಗುತ್ತಿದ್ದು, ಅದರ ನಿವಾರಣೆಗೆ ಈ 'ಮುಡಿ' ಕೊಡುವುದು ಉಪಾಯವಾಗಿದ್ದಿತು. ಇದರಲ್ಲಿ ೨ ಬಗೆಯ ವಿಧಾನಗಳಿವೆ.

ಅ. **ತಲೆಯ ಎಲ್ಲಾ ಕೂದಲನ್ನೂ ಮುಡಿಕೊಡುವುದು:** ಹರಕೆ ಕಟ್ಟಿಕೊಂಡಾಗ ಅವರು ಅಂದುಕೊಂಡಿದ್ದು ನೆರವೇರಿದಾಗ ತಲೆಯ ಇಡೀ ಕೂದಲನ್ನು ತೆಗೆಸುವುದಾಗಿದೆ.

ಆ. **ಪಂಚಮುಡಿ:** ಇದನ್ನು ಹೆಚ್ಚಾಗಿ ಹೆಣ್ಣು ಮಕ್ಕಳು ಕೊಡುತ್ತಾರೆ, ಅಂದರೆ ತಲೆಯ ಐದು ಕಡೆ ಸ್ವಲ್ಪ ಕೂದಲನ್ನು ತೆಗೆಯುವುದು. ಈ ರೀತಿಯ ಮುಡಿಯಲ್ಲಿ ಹೆಣ್ಣುಮಕ್ಕಳ ಮುಖದ ಅಂದ ಕೆಡುತ್ತದೆಂದೊ ಏನೋ ಈ ತರಹದ ಒಂದು ವ್ಯವಸ್ಥೆ ಮಾಡಿಕೊಂಡರಬಹುದೇನೋ ಎಂದೆನಿಸದಿರುದು.

೨) **ಧೂಪದ ಸೇವೆ:** ಇದು ಮಾದೇಶ್ವರನ ಜಾತ್ರೆ, ಸಂಕ್ರಾಂತಿ ಹಬ್ಬದಲ್ಲಿ ಒಂದು ಹರಕೆಯಾಗಿ ಬೆಳೆದುಬಂದಿದೆ. ಈ ಹರಕೆಯನ್ನು ಹೆಚ್ಚು ಮಹಿಳೆಯರು ಆಚರಿಸುತ್ತಾರೆ. ಧೂಪದ ಸೇವೆ ಎಂದರೆ ದೇವರ ಜಾತ್ರೆಯ ದಿನ ದೇವರನ್ನು ಗಂಗೆಯ ಸನ್ನಿಧಿಯಲ್ಲಿ ದೇವರಿಗೆ ಹೂವು ಹೊಂಬಾಳೆಯಾಗಿ ಅಲಂಕೃತಗೊಂಡು ಬಾವಿಯಿಂದ ಬರುವ ಸಂದರ್ಭದಲ್ಲಿ ಗಂಧದಕಡ್ಡಿ ಹೋಗುವ ಸಂದರ್ಭ ಇವರೆಲ್ಲ ಆ ದಿವಸವೇ ಹಸಿರು ಇರಬೇಕು. ಆ ಮೂಲಕ ಕಷ್ಟ ನಿವಾರಣೆಯಾಗುತ್ತದೆ. ಜೊತೆಗೆ ಒಳ್ಳೆ ಗಂಡನನ್ನು ವರವಾಗಿ ಪಡೆಯುವ ಬಯಕೆಯಿಂದ ಹೆಣ್ಣುಮಕ್ಕಳು ಇದನ್ನು ಆಚರಿಸುತ್ತಾರೆ. ಜೊತೆಗೆ ಯಾವುದಾದರೂ ರೋಗ ಬಂದಂತಹ ಸಂದರ್ಭದಲ್ಲಿ ಹಸಿದು ಪೂಜೆ ಮಾಡುವುದು ಆರೋಗ್ಯದ ದೃಷ್ಟಿಯಿಂದ ಒಳ್ಳೆಯದಲ್ಲವೆ. ಆ ಅಭಿಪ್ರಾಯದಿಂದ ದೇವರ ಹೆಸರಿನಿಂದ ಈ ಪದ್ಧತಿ ರೂಪಿಸಿಕೊಂಡಿದ್ದಾರೆ. ದೇವರ ಮೇಲಿನ ನಂಬಿಕೆಗಳನ್ನು, ಆಚರಣೆಗಳನ್ನು ಉಳಿಸಿಕೊಂಡು ಜೊತೆಗೆ ತಮ್ಮ ಆರೋಗ್ಯವನ್ನೂ ಕಾಪಾಡಿಕೊಳ್ಳುವುದು ಅದರ ಪರೋಕ್ಷ ಸಹಾಯಕವೂ ಆಗಿವೆ.

೩) **ಉರುಳುಸೇವೆ:** ಒಂದು ಕುಟುಂಬದಲ್ಲಿ ಯಾವುದೇ ವ್ಯಕ್ತಿಗೆ ಯಾವುದಾದರೂ ಕಾಯಿಲೆ ಬಂದಾಗ ಅಂದರೆ ಮೈಯ ಮೆಲೆ ದೆವ್ವ ಬರುವುದು, ವಿಪರೀತ ಭಯಪಡುವುದು, ಚರ್ಮರೋಗ ಹೀಗೆ ಇನ್ನಾವುದೇ ತೊಂದರೆಗಳು ಇದ್ದರೂ ಈ ಹರಕೆಯನ್ನು ಕಟ್ಟಿಕೊಳ್ಳುತ್ತಾರೆ. ಒದ್ದೆ ಬಟ್ಟೆಯಲ್ಲೇ ದೇವಸ್ಥಾನದ ಸುತ್ತ ನೆಲದ ಮೆಲೆ ಹೊರಳಿ ಈ ಹರಕೆಯನ್ನು ತೀರಿಸುತ್ತಾರೆ. ಇದರಿಂದಾಗಿ ಅವರಲ್ಲಿರುವ ತೊಂದರೆ ನಿವಾರಣೆಯಾಗುತ್ತದೆ ಎಂಬ ನಂಬಿಕೆ ಇದೆ. ಈ ನಂಬಿಕೆಯಿಂದ ಮಾನವನಿಗೆ ಮಾನಸಿಕ ಸ್ಥಿರತೆ ಸಾಧ್ಯವಾಗುವ ಶಕ್ತಿ ತಿಳಿದಿದೆ. ಆದ್ದರಿಂದ ಜಗತ್ತಿನಲ್ಲಿ ತಾನು ಅಸ್ತಿತ್ವಕ್ಕೆ ಬಂದ ಕಾಲದಿಂದಲೂ ಇಂದಿನವರೆಗೂ ಪ್ರಕೃತಿಯಲ್ಲಿರುವ ವಿವಿಧ ಶಕ್ತಿಗಳನ್ನು ಮಾನವ ತನ್ನ ಬಳಕೆಯ ಉಪಯೋಗಕ್ಕೆ ಬಳಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ. ಒಟ್ಟಾರೆಯಾಗಿ ಧರ್ಮದ ಹಸಿವು, ಜಾತಿ ಹಸಿವು ಎಲ್ಲಾ ಕಾಲಕ್ಕೂ ಇರುವಂತಹವು. ಅವುಗಳನ್ನು ನಿರ್ಮೂಲನೆ ಮಾಡಲು ಸಾಧ್ಯವಿಲ್ಲ ಎಂಬುದು ತಿಳಿಯುತ್ತದೆ. ಮಣ್ಣಿನಲ್ಲಿ ಹಲವಾರು ರೋಗ ನಿರೋಧಕ ಗುಣಗಳಿರುವುದು ವೈಜ್ಞಾನಿಕ ಸಂಸೋಧನೆಯಿಂದ ತಿಳಿದಿದೆ. ಇದು ವಾಸ್ತವವಾದ ಸತ್ಯವನ್ನು ಪ್ರತಿಪಾದಿಸುತ್ತದೆ.

**೪) ಹುಲಿವಾನರ ಹೊರುವುದು:** ಮಾದೇಶ್ವರ ದೇವಸ್ಥಾನದಲ್ಲಿ ಹುಲಿಯ ಮರದ ವಿಗ್ರಹವಿದೆ. ಅದನ್ನು 'ವಾನರ' ಎಂದು ಕರೆಯುತ್ತಾರೆ. ಇದನ್ನು ಹೊರಲು ಅದರ ಒಕ್ಕಲಿನವರು ಮತ್ತು ಭಕ್ತರು ಹರಿಕೆಯನ್ನು ಮಾಡಿಕೊಳ್ಳುತ್ತಾರೆ. ಅದರ ಪ್ರಕಾರವಾಗಿ ಜಾತ್ರೆಯ ದಿನ ಭಕ್ತರು ಹರಕೆಯನ್ನು ಹೊತ್ತ ಮನೆಯವರು ಅದನ್ನು ಗುಡಿಯ ಸುತ್ತ ಹೊತ್ತು ಮೆರವಣಿಗೆ ಮಾಡುವ ಪದ್ಧತಿ ಇದೆ. ಇದನ್ನು ಎಲ್ಲಾ ಭಕ್ತಾದಿಗಳು ಮಾಡಿಸುತ್ತಾರೆ. ಈ ಹುಲಿವಾನರ ಏಕೆ ಇಲ್ಲಿಗೆ ಬಂತು ಮತ್ತು ಇದರ ಆಚರಣೆ ಯಾವಾಗ ಪ್ರಾರಂಭವಾಯಿತು ಮತ್ತು ಇದಕ್ಕೂ ಮಾದೇಶ್ವನಿಗೂ ಇರುವ ಸಂಬಂಧವೇನು ಎಂಬುದಕ್ಕೆ ಇಲ್ಲಿನ ಜನಪದರು ಮತ್ತು ಪೂಜಾರಿಗಳಿಂದ ಯಾವುದೇ ರೀತಿಯ ಉತ್ತರಗಳಿಲ್ಲ. ಇದನ್ನು ತಮ್ಮ ಪೂರ್ವಿಕ ಮಾಡಿಕೊಂಡು ಬರುತ್ತಿದ್ದರು. ಅದನ್ನು ನಾವು ಮುಂದುವರಿಸಿಕೊಂಡು ಬರುತ್ತಿದ್ದೇವೆ ಎನ್ನುವ ಉತ್ತರ ಬರುತ್ತಿತ್ತು.

**೫) ಬಲಿಕೊಡುವ ಹರಕೆ:** ಇಲ್ಲಿ ಮಾರಮ್ಮನಿಗೆ ಸಿದ್ದಪ್ಪಾಜಿಗೆ ಬಲಿಯ ಹರಕೆ ಇದೆ. ತಮ್ಮ ಹರಕೆ ಈಡೇರಿದಾಗ ಇಲ್ಲಿಗೆ ಬಂದು ಬಲಿ ಕೊಡುತ್ತಾರೆ. ಜಾತ್ರೆಗೆ ಜನಪದರು ಬಲಿಯ ಪ್ರಕ್ರಿಯೆ ಪ್ರಾರಂಭವಾದದ್ದು ಬುಡಕಟ್ಟು ಜನಾಂಗದಿಂದ ಬ್ಯಾಡರು ಅದನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಜೊತೆಗೆ ಬಲಿಯನ್ನು ಕೊಡದೆ ಇದ್ದರೆ ಅವರಿಂದ ಕೇಡು ಸಂಭವಿಸುತ್ತದೆ ಎಂಬ ನಂಬಿಕೆಯಿದೆ. ಆದ್ದರಿಂದ ಸಂಪ್ರದಾಯದಂತೆ ಬಲಿಯನ್ನು ಕೊಡುತ್ತಾರೆ. ಇದೊಂದು ಕೆಟ್ಟ ನಂಬಿಕೆಯಾದರೂ ಅದನ್ನು ಆಚರಿಸುತ್ತಾ ಬರುತ್ತಿದ್ದಾರೆ.

**೬) ಮೆರವಣಿಗೆ ಮಾಡಿಸುವುದು:** ಊರಿನ ಕೆಲವರು ಹಾಗೆ ಹರಕೆ ಹೊತ್ತವರು ತಮಗೆ ಒಳ್ಳೆಯದಾಗಲಿ ಎಂದು ಮತ್ತು ಒಂದು ಕಾರ್ಯದಲ್ಲಿ ಒಳ್ಳೆಯದಾದರೆ ಮೆರವಣಿಗೆ ಮಾಡಿಸುತ್ತೇವೆಂದು ಹರಕೆ ಹೊತ್ತಿರುತ್ತಾರೆ. ಅದರಂತೆ ಅವರಿಗೆ ಒಳ್ಳೆಯದಾದರೆ ಅವರು ಜಾತ್ರೆಯ ಹಿಂದಿನ ದಿನ ದೇವರನ್ನು ಶೃಂಗಾರ ಮಾಡಿ ಬಾವಿಯಿಂದ ಹೂ ಹೊಂಬಾಳೆ ತೊಡಿಸಿ ಊರಲೆಲ್ಲಾ ಮೆರವಣಿಗೆ ಮಾಡಿಸುತ್ತಾರೆ. ಇದು ಸರ್ವೇಸಾಮಾನ್ಯವಾಗಿದೆ. ಮೊದಲು ಹೊತ್ತು ತಿರುಗುತ್ತಿದ್ದರು. ಈಗ ಟ್ರಾಕ್ಟರ್ ಮೂಲಕ ಮೆರವಣಿಗೆ ಮಾಡಿಸುತ್ತಾರೆ. ಈ ವೇಳೆ ಇಡೀ ಊರಿನ ಮನೆಗಳೆಲ್ಲ ಪೂಜೆ ಸಲ್ಲಿಸುತ್ತಾರೆ. ಹೂ, ಕಾಯಿ, ಹಣ್ಣು, ನೈವೇದ್ಯ ಹೀಗೆ ದೇವರಿಗೆ ಪೂಜೆ ಸಲ್ಲಿಸುತ್ತಾರೆ. ದೇವರ ಭಯದಿಂದ ಉತ್ಸಾಹದಿಂದ ಈ ಕಾರ್ಯವನ್ನು ಮಾಡುತ್ತಾರೆ.

**೭) ಹಾಲರವಿ ಸೇವೆ:** ಇದೊಂದು ಜಾತ್ರೆಯ ಪ್ರಮುಖ ಆಕರ್ಷಣೆಯಾಗಿದೆ. ಇದು ಕೊಂಡೋತ್ಸವದ ಹಿಂದಿನ ರಾತ್ರಿ. ಊರೊಳಗಿನ ಬಾವಿಯಿಂದ ಆರಂಭಿಸಿ,

ಮಾದೇಶ್ವರನ ಸನ್ನಿದಿಗೆ ತಲುಪುತ್ತದೆ. ಇಲ್ಲಿ ಕೊಂಡವನ್ನು ಹಾಯುವ ಮೂರು ಜನರೊಂದಿಗೆ ಮೈನೆರೆಯದು ಐದು ಬಲಕಿಯರ ತಲೆ ಮೇಲೆ ಐದು ಮಣ್ಣಿನ ಮಡಿಕೆಗಳಿಗೆ ಬಾವಿ ನೀರನ್ನು ಮಡಿಯಿಂದ ತುಂಬಿಸಿ ಪೂಜೆ ಮಾಡಿ ನಂತರ ತಮಟೆ, ನಂದಿಕಂಬ, ನಗಾರಿ, ಡೋಲು, ವಾದ್ಯಗಳ ಸಮೇತ ಇಡೀ ಊರಿನ ಬೀದಿಗಳಲ್ಲಿ ಮೆರವಣಿಗೆ ನಡೆಯುತ್ತದೆ. ಇಂತಹ ವೇಳೆ 'ಹಲಗೆ ಕಟ್ಟುವ' ಕಾರ್ಯವಿದ್ದು ಇದನ್ನು ನಮ್ಮೂರಿನವರು ಮಾತ್ರ ಕಟ್ಟಬೇಕು. ಇದು ದೇವರನ್ನು ಹೊರುವ ಒಂದು ಪದ್ಧತಿ. ಹರಕೆ ಹೊತ್ತವರೂ ಸಹ ಈ ಹಲಗೆಯನ್ನು ಕಟ್ಟುತ್ತಾರೆ.

**೮) ಪಂಜಿನ ಸೇವೆ:** ಇದನ್ನು ದೀಪಾವಳಿ ಹಬ್ಬದಲ್ಲಿ ಮಾಡುವಂತಹ ಒಂದು ಸೇವೆಯಾಗಿರುತ್ತದೆ. ಕೊಂಡೋತ್ಸವದ ದಿನ, ಅಂದರೆ ಹಬ್ಬವಾದ ನಾಳೆಗೆ ನಡೆಯುವ ಜಾತ್ರೆಯ ದಿನದಂದು ಮಾಡುತ್ತಾರೆ. ಕೊಂಡವನ್ನು ಹಾಯ್ದ ನಂತರ ಭಕ್ತಾದಿಗಳೆಲ್ಲರೂ ಕೊಂಡ ಹಾಯ್ದ ಭಕ್ತರಿಗೆ ನಮಸ್ಕರಿಸಿ, ದೇವರಿಗೆ ಹೂವು, ಕಾಯಿ ಹಣ್ಣಿನ ಪೂಜೆ ನೆರವೇರಿಸಿದ ಮೇಲೆ ಈ ಊರಿನ ಹಾಗೂ ಸುತ್ತಮುತ್ತಲಿನ ಹಳ್ಳಿಗಳ ಜನರು ತಮ್ಮ ತಮ್ಮ ಸಾಕುಪ್ರಾಣಿಗಳನ್ನು ಇಲ್ಲಿಗೆ ಕರೆತಂದು ಕಳ್ಳಿಕೋಲಿನಿಂದ ಮಾಡಿದ ಪಂಜನ್ನು ಹೊತ್ತಿಸಿಕೊಂಡು, ದೇವರಗುಡಿಯ ಸುತ್ತಾ ಪಂಜನ್ನು ಹಿಡಿದುಕೊಂಡು ತಮ್ಮ ಸಾಕುಪ್ರಾಣಿಗಳನ್ನು ಮೂರು ಸುತ್ತು ಸುತ್ತಿಸುತ್ತಾರೆ. ಇದರಿಂದ ತಮ್ಮ ಸಾಕು ಪ್ರಾಣಿಗಳ ಆರೋಗ್ಯದ ಮೇಲೆ ಯಾವ ಕಾಯಿಲೆ ಕಸಾಲೆಗಳೂ ಬರುವುದಿಲ್ಲ ಎಂಬ ನಂಬಿಕೆಗಳನ್ನು ಇಟ್ಟುಕೊಂಡು ಸೇವೆಯಲ್ಲಿ ತೊಡಗುತ್ತಾರೆ.

**೯) ಪರಸೇವೆ:** 'ಪರ' ಎಂದರೆ ಇಲ್ಲಿನ ದೇವರುಗಳಿಗೆ ತಿಂಗಳಿಗೊಮ್ಮೆ ಅಥವಾ ವರ್ಷಕ್ಕೊಮ್ಮೆ ಊರಿನಲ್ಲಿ ಆ ದೇವರ ಆರಾಧಕರು, ಭಕ್ತರು ಅಥವಾ ಹರಕೆ ಕಟ್ಟಿಕೊಂಡವರು ಇದನ್ನು ಮಾಡುತ್ತಾರೆ. ಅಂದರೆ ಹಿಂದೆ ವರ್ಷಕ್ಕೊಮ್ಮೆ ಮಾಡುತ್ತಿದ್ದರು. ಆದರೆ ಇಂದು ಮಹದೇಶ್ವರ ದೇವಾಲಯಕ್ಕೆ ಜೀರ್ಣೋದ್ಧಾರ ಮಾಡಿ ಹೊಸದಾಗಿ ಕಟ್ಟಡಗಳನ್ನು ನಿರ್ಮಿಸಿ ಒಂದು ಸಮಿತಿಯೂ ರಚನೆಗೊಂಡಿದೆ. ಈ ಸಮಿತಿಯ ಮೂಲಕವೇ ಇಂದು ಪ್ರತಿಯೊಂದು ಕಾರ್ಯಕ್ರಮವೂ ನಡೆಯುತ್ತಿದೆ. ಪ್ರತಿ ಅಮವಾಸ್ಯೆಯಂದು ಊರಿನವರಾಗಲೀ, ಬೇರೆ ಭಕ್ತರಾಗಲೀ ನೀಡಿದಂತಹ ಆಹಾರಧಾನ್ಯಗಳು, ಕಾಣಿಕೆಗಳನ್ನು ಸಂಗ್ರಹಿಸಿ, ಅದರಿಂದ 'ಪರ'ವನ್ನು ಮಾಡುತ್ತಾರೆ. ಕೆಲ ಭಕ್ತರು ಹರಕೆ ಕಟ್ಟಿಕೊಂಡಿರುತ್ತಾರೆ. ಅಂತವರೇ 'ಪರಸೇವೆ'ಯ ಪೂರ್ತಿ ಖರ್ಚುವೆಚ್ಚಗಳನ್ನು ಭರಿಸುತ್ತಾರೆ. 'ಪರ' ಎಂದರೆ ದೇವಸ್ಥಾನದ ಬಳಿಯೇ ಒಲೆಗಳನ್ನು ನಿರ್ಮಿಸಿ ಅಲ್ಲಿಯೇ ಅನ್ನ, ಸಾಂಬಾರು ತಯಾರಿಸಿ, ದೇವರಿಗೆ ನೈವೇದ್ಯಮಾಡಿ ಅಂದು, ಇಡೀ ಊರಿನ ಯಾವ ಮನೆಯಲ್ಲೂ ಒಲೆ ಹಚ್ಚಬಾರದೆಂದು

ಸಾರಿರುತ್ತಾರೆ. ಊರಿನ ಜನರು ಇಲ್ಲಿಯೇ ಬಂದು ಪ್ರಸಾದವನ್ನು ಉಂಡುಹೋಗುತ್ತಾರೆ.

೧೦) **ಬಾಯಿಬೀಗ:** ದೇವರಲ್ಲಿ ತಮ್ಮ ಇಷ್ಟಾರ್ಥಗಳು ನೆರವೇರಬೇಕೆಂದು ಬಾಯಿಬೀಗದ ಹರಕೆ ಕಟ್ಟಿಕೊಂಡ ಭಕ್ತಾದಿಗಳು, ತಮ್ಮ ಇಷ್ಟಾರ್ಥಗಳು ನೆರವೇರಿದ ಮೇಲೆ 'ಬಾಯಿಬೀಗ' ಹಾಕಿಸಿಕೊಂಡು ಹರಕೆ ತೀರಿಸುತ್ತಾರೆ. ಕೆನ್ನೆಯ ಎರಡೂ ಕಡೆಯಿಂದ ಕಬ್ಬಿಣದ ಕಡ್ಡಿಯನ್ನು ಚುಚ್ಚಿಸಿಕೊಂಡು ಸೇವೆಯನ್ನು ಮಾಡುತ್ತಾರೆ. ಚಿಕ್ಕಮಕ್ಕಳು, ಹೆಂಗಸರು, ಗಂಡಸರು, ಹಿರಿಯರೆನ್ನದೆ ಎಲ್ಲಾ ವಯೋಮಾನದವರೂ ಈ ಸೇವೆಯನ್ನು ಮಾಡುತ್ತಾರೆ. ಇದನ್ನು ಹೆಚ್ಚಾಗಿ ಜಾತ್ರೆಯ ಸಂದರ್ಭದಲ್ಲಿ ಮಾಡುತ್ತಾರೆ.

೧೧) **ಹಲಗೆ ಕಟ್ಟುವ ಸೇವೆ:** ಹಲಗೆ ಕಟ್ಟುವುದೆಂದರೆ, ಯುಗಾದಿ ಹಾಗೂ ದೀಪಾವಳಿಯಲ್ಲಿ ಊರಿನ ಪ್ರಮುಖ ದೇವರುಗಳಾದ ಮಹದೇಶ್ವರ ಸ್ವಾಮಿ, ಲಕ್ಷ್ಮೀಕಾಂತಸ್ವಾಮಿ ಮತ್ತು ಸಿದ್ಧಪ್ಪಾಜಿ ದೇವರುಗಳ ವಿಗ್ರಹಗಳನ್ನು ಎಡಕೈಯಿಂದ ಹಿಡಿದುಕೊಂಡು ಎದೆಗೆ ಒಗರಿಸಿಕೊಂಡು, ಬಲಗೈಯಲ್ಲಿ ಕತ್ತಿಯನ್ನು ಹಿಡಿದು ಲಕ್ಷ್ಮಿಕಾಂತ ದೇವಸ್ಥಾನದ ಬಳಿಯ ಬಾವಿಯಲ್ಲಿ ಸ್ನಾನಮಾಡಿ, ಮೆರವಣಿಗೆಯಲ್ಲಿ ನಡೆದು ಮಹದೇಶ್ವರ ದೇವಾಲಯ ತಲುಪುತ್ತಾರೆ. ಇದನ್ನು ಹಲಗೆಕಟ್ಟುವುದು ಎಂದು ಕರೆಯುತ್ತಾರೆ. ಇದನ್ನು ಹರಕೆ ಹೊತ್ತಿರುವವರು ಕಟ್ಟುತ್ತಾರೆ. ಆದರೆ ಒಂದು ನಿಯಮವಿದೆ, ಇದನ್ನು ವೀರಶೈವರು ಮಾತ್ರ ನಡೆಸಿಕೊಂಡು ಬಂದಿರುವ ಪದ್ಧತಿ. ಜೊತೆಗೆ ಊರಿನ ಸ್ವಂತ ಗಂಡಸರಿಗೆ ಮಾತ್ರ ಅವಕಾಶವಿರುತ್ತದೆಯೇ ಹೊರತು ಬೇರೆ ಊರಿನವರಿಗಾಗಲೀ, ಈ ಊರಿನ ನೆಂಟರಿಗೆ, ಸಂಬಂಧಿಕರಿಗಾಗಲೀ ಈ ಅವಕಾಶ ಇರುವುದಿಲ್ಲ. ಹಲಗೆ ಕಟ್ಟುವ ಸೇವೆಯಲ್ಲಿ ಮುಖ್ಯವಾಗಿ ದೀಪಾವಳಿಯ ಕೊಂಡ ಹಾಯುವವರು ಮುಖ್ಯರಾಗಿರುತ್ತಾರೆ. ಇಲ್ಲಿಯೂ ಮೇಲಿನ ನಿಯಮವೇ ಪಾಲಿಸಬೇಕಾಗುತ್ತದೆ.

**ದೇವಾಲಯಗಳ ಪರಿಚಯ ಮತ್ತು ವೈಶಿಷ್ಟ್ಯಗಳು:**

ಮಾನವನು ವಿಕಾಸವಾದಂದಿನಿಂದಲೂ ಅನೇಕ ರಈತಿಯಲ್ಲಿ ತನ್ನ ಜೀವನವನ್ನು ನಡೆಸಿಕೊಂಡು ಬಂದಿದ್ದಾನೆ. ಜೊತೆಗೆ ತನ್ನ ಜೀವನದ ನಿರ್ವಹಣೆಗಾಗಿ ಹಸಿವನ್ನು ನಿವಾರಿಸಿಕೊಳ್ಳುವ ಸಲುವಾಗಿ ಅನೇಕ ಕಾಡು ಪ್ರಾಣಿಗಳನ್ನು ಭೇಟಿಯಾಡಿ ತಿನ್ನುತ್ತಿದ್ದ. ಜೊತೆಗೆ ಕಾಡಿನಲ್ಲಿ ಅನೇಕ ಹಣ್ಣು ಹಂಪಲು, ಗೆಡ್ಡೆ-ಗೆನಸುಗಳನ್ನು ತಿನ್ನುತ್ತಾ ಕಾಲ ಕಳೆಯತೊಡಗಿದ. ಹೀಗೆ ತನ್ನ ದಿನನಿತ್ಯದ ಬದುಕನ್ನು ನಡೆಸುತ್ತಾ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆಹೋಗುತ್ತಾ ಇದ್ದ ನಂತರ ಆತನು

ಒಂದು ಕಡೆ ನೆಲೆಸಲು ಪ್ರಾರಂಭಿಸಿದನು. ಜೊತೆಗೆ ಅನೇಕ ಪ್ರಾಣಿಗಳನ್ನು ಪಳಗಿಸಿ ವ್ಯವಸಾಯ ಮಾಡಲು ಪ್ರಾರಂಭಿಸಿದನು. ನಾಗರಿಕತೆ ಆತನನ್ನು ಆವರಿಸಿಕೊಂಡ ನಂತರ ಒಂದೇ ಕಡೆ ನೆಲೆಸಲು ಪ್ರಾರಂಭಿಸಿದನು. ಒಟ್ಟಾಗಿ ನೆಲೆಸುವುದನ್ನು ಕಲಿತುಕೊಂಡ ಜೀವಿಯಾದ ಮೇಲೆ ಈತನು ಭಾವನೆಯ ಹಂಚಿಕೊಳ್ಳಲು ಪ್ರಾರಂಭಿಸಿದ. ಆಗ ಆತನಲ್ಲಿ ಆಸೆಯನ್ನು, ಆಕಾಂಕ್ಷೆ, ಪ್ರೀತಿ, ಪ್ರೇಮ, ಸಹಕಾರ, ಸಹಬಾಳ್ವೆ ಬೆಳೆದಂತೆ ಆತನಲ್ಲಿ ಕಷ್ಟ ದುಃಖಗಳು ಪ್ರಾರಂಭವಾದ ನಂತರ ಆತನಲ್ಲಿ ಭಯ, ದಾಹದುಮ್ಮಾನಗಳು ನೆಲೆಸುತ್ತಾ ಹೋದವು. ಇಂತಹ ಮಾನಸಿಕವಾದ ತುಮುಲ, ತಳಮಳ ಆತನಲ್ಲಿ ಸೃಷ್ಟಿಯಾದ ನಂತರ ಆತನು ಅವುಗಳಿಂದ ಬಿಡುಗಡೆಯನ್ನು ಹೊಂದಲು ದೇವರು ದೈವತ್ವದ ಪರಿಕಲ್ಪನೆಯನ್ನು ಮಾಡಿಕೊಂಡ, ಇದರಿಂದಾಗಿ ಆತನಿಗೆ ಮಾನಸಿಕ ನೆಮ್ಮದಿ, ಪಾಪದ ಪರಿಹಾರ ಇತ್ಯಾದಿಗಾಗಿ ಪ್ರಕೃತಿಯನ್ನು ಆರಾಧಿಸಿದ. ಇದರಿಂದಾಗಿ ಪಾಪದ ಪರಿಹಾರ ಭಯದ ನಿವಾರಣೆಗಾಗಿ ಆ ದೇವರ ದೈವದ ಬೆಂಗಾವಲಲ್ಲಿ ರಕ್ಷಣೆಯನ್ನು ಪಡೆದ. ಹೀಗೆ ದೇವಾಲಯಗಳು ನಿರ್ಮಾಣವಾಗಿರಬಹುದೆನ್ನಬಹುದು.

ಮಾನವನು ಈ ವರ್ತನೆಯಿಂದ ಅನೇಕ ಗುಡಿ–ಗೋಪುರಗಳನ್ನು ನಿರ್ಮಿಸಿದ. ಅವುಗಳಿಗೆ ವೈಭವದ ರೀತಿಯಲ್ಲಿ ಪೂಜೆ ಪುರಸ್ಕಾರಗಳನ್ನು ಮಾಡತೊಡಗಿದನು. ದೇವಾಲಯಗಳ ಸ್ಥಾಪನೆಯಾದ ನಂತರ ಧಾರ್ಮಿಕ ಆಚರಣೆಗಳನ್ನು ಮಾಡತೊಡಗಿದನು. ಹೆಚ್ಚು ಆದಾಯ ಬಂದಾಗ ಕೃಷಿಯಲ್ಲಿ ಹೆಚ್ಚು ಇಳುವರಿ ನೀಡಿದಾಗ, ಜೊತೆಗೆ ಬಿಡುವಿನ ವೇಳೆ ಜಾತ್ರೆ ಹಬ್ಬಗಳನ್ನು ಸೃಷ್ಟಿಸಿ ಅಲ್ಲಿ ಹರಕೆ, ಬಲಿ ನೀಡಲಾರಂಭಿಸಿದನು. ಹೀಗೆ ಧಾರ್ಮಿಕ ಚಟುವಟಿಕೆಯನ್ನು ಪ್ರಬಲವಾಗಿ ನಿರೂಪಿಸುವ ಸಲುವಾಗಿ ದೇವಾಲಯಗಳು ಕಂಡುಬಂದವು. ಈ ದೇವಾಲಯಗಳು ಚರಿತ್ರೆಯ ವಿವಿಧ ಯುಗಗಳಲ್ಲಿ ಕಾಲಗಳಲ್ಲಿ ಮತ್ತು ದೇಶದ ಬೇರೆ ಬೇರೆ ಭಾಗಗಳಿಗೆ ಪ್ರಚಲಿತದಲ್ಲಿದ್ದ ಧರ್ಮಗಳ ಪ್ರಾಧಾನ್ಯತೆಯನ್ನು ಪ್ರತಿಬಿಂಬಿಸುವುದಲ್ಲದೆ ಜನರ ಅಭಿರುಚಿ ಧರ್ಮದಲ್ಲಿನ ಶ್ರದ್ಧೆ, ಸಾಮಾಜಿಕ ಸಂಪ್ರದಾಯ, ನಂಬಿಕೆ, ಆಚರಣೆ ಇತ್ಯಾದಿ ಸಮಕಾಲೀನ ವಿಷಯಗಳನ್ನು ತಿಳಿಸುವ ಬಹುಮುಖ ದಾಖಲೆಗಳ ಆಗರವಾಗಿದೆ. ಪ್ರಾಚೀನ ಕಾಲದಿಂದಲೂ ಪ್ರಾರಂಭವಾದ ದೇವಾಲಯ ನಿರ್ಮಾಣ ಯಾವುದೇ ಅಡ್ಡಿ ಆತಂಕಗಳಲ್ಲದೆ ಸಾಗಿಬಂದಿದೆ. ಭಾರತವು ಬಹುದೇವರ ಆರಾಧನೆಯನ್ನು ಮಾಡಿಕೊಂಡು ಬರುತ್ತಿದೆ. ಊರೂರಿಗೂ ಒಂದೊಂದು ಗ್ರಾಮದೇವರನ್ನು ಕಾಣಬಹುದಾಗಿದೆ. ಅದು ಇಲ್ಲಿನ ಜನರ ಮೇಲೆ ಧರ್ಮದ ಮುದ್ರೆ ಒತ್ತಿ ಅವರ

ನೈತಿಕ ಮಟ್ಟ ಸುಧಾರಿಸಿವೆ. ಹೀಗಾಗಿ ದೇವಾಲಯಗಳ ಮೂಲಕ ಮನುಷ್ಯ ನೆಮ್ಮದಿಯನ್ನು ಕಾಣುವಂತ ಪ್ರಯತ್ನ ಮಾಡಿದ್ದಾನೆ.

ಅದೇ ರೀತಿ ಈ ಗ್ರಾಮವೂ ಕೂಡ ಮಾನವನ ವಿಕಾಸವಾದ ಮೇಲೆ ಏನೆಲ್ಲಾ ಬದಲಾವಣೆ ಹಂತಗಳು ಸಾಗುತ್ತವೆಯೋ ಅದೇ ರೀತಿ ಸಾಗಿಬಂದಿದೆ. ಅದರಲ್ಲಿ ದೇವಾಲಯಗಳ ಹಂತವೂ ಮುಖ್ಯವಾಗಿ ಕಂಡುಬರುತ್ತದೆ. ಹಿಂದೆ ದೇವಾಲಯಗಳೇ ವಿದ್ಯಾಕೇಂದ್ರಗಳಾಗಿದ್ದವು, ಧಾರ್ಮಿಕ ಕೇಂದ್ರಗಳೂ ಆಗಿದ್ದವು. ಕ್ಯಾತನಹಳ್ಳಿಯು ಅನೇಕ ದೇವಾಲಯಗಳನ್ನು ತನ್ನೊಡಲಲ್ಲಿ ಇಟ್ಟುಕೊಂಡಿದೆ. ಇಲ್ಲಿರುವ ಪ್ರತಿಯೊಂದು ದೇವಾಲಯವೂ ತಮ್ಮ ಇತಿಹಾಸವನ್ನು ಸಾರಿಹೇಳುತ್ತವೆ. ಇಲ್ಲಿ ಹಲವಾರು ಜಾತಿಯ ಜನರಿದ್ದರೂ ಕೂಡ ಎಲ್ಲರೂ ಎಲ್ಲಾ ದೇವರನ್ನೂ ಪೂಜಿಸುತ್ತಾರೆ. ಯಾವುದೇ ಹಬ್ಬ-ಹರಿದಿನಗಳಾಗಲಿ ತಮ್ಮ ತಮ್ಮ ಪಾಲಿನ ಕೆಲಸಕಾರ್ಯಗಳನ್ನು ಅಚ್ಚುಕಟ್ಟಾಗಿ ನಿಭಾಯಿಸುತ್ತಾರೆ. ಇದರಿಂದಾಗಿ ಯಾವುದೋ ಸಮಸ್ಯೆಗಳು ಬರುತ್ತಿಲ್ಲ. ಹಿಂದೆ ದೇವಾಲಯಗಳು ಸಂಪತ್ತಿನ ಕ್ರೂಡೀಕರಣದ ಜಾಗಗಳಾಗಿ ಇದ್ದವೆನ್ನಬಹುದು. ಆಗ ರಾಜಮಹಾರಾಜರು ತಮ್ಮ ಇಷ್ಟದೇವರಿಗೆ ಒಡವೆ, ಐಶ್ವರ್ಯ, ಹಣ ಇತ್ಯಾದಿಗಳನ್ನು ಕಾಣಿಕೆಯಾಗಿ ನೀಡುತ್ತಿದ್ದರು. ಅದೇ ರೀತಿ ಕ್ಯಾತನಹಳ್ಳಿಯ ದೇವಾಲಯಕ್ಕೂ ನೀಡಿದ್ದರೆಂಬ ಪ್ರತೀತಿ ಇದೆ.

ಕ್ಯಾತನಹಳ್ಳಿಯಲ್ಲಿ (೧) ಮಹದೇಶ್ವರನ ದೇವಾಲಯ,
(೨) ಗ್ರಾಮದೇವಿ ಮಾರಮ್ಮ,
(೩) ಲಕ್ಷ್ಮೀಕಾಂತ ದೇವಸ್ಥಾನ,
(೪) ಸಿದ್ದಪ್ಪಾಜಿ ದೇವಾಲಯ
(೫) ಬಸವೇಶ್ವರ ದೇವಾಲಯ
(೬) ಶ್ರೀರಾಮಮಂದಿರ

ಈ ಐದು ದೇವಾಲಯಗಳನ್ನು ನಾವು ನೋಡಬಹುದು. ಈ ದೇವಾಲಯಗಳ ಮಹಿಮೆಯನ್ನು, ವೈಶಿಷ್ಟ್ಯತೆಗಳನ್ನು ತಿಳಿದುಕೊಳ್ಳೋಣ.

೧) **ಮಹದೇಶ್ವರ ದೇವಸ್ಥಾನ:** ಈ ದೇವಸ್ಥಾನ ಇಡೀ ಹಳ್ಳಿಗೆ ಕಳಶಪ್ರಾಯ ವಿದ್ದಂತೆ. ಇದು ಇಡೀ ಸುತ್ತಮುತ್ತಲಿನ ಹಳ್ಳಿಗಳಿಗೆ ತುಂಬಾ ಪ್ರಸಿದ್ಧವಾದ, ಭಯಭಕುತಿ ಹುಟ್ಟಿಸುವಂತಹ ದೇವಸ್ಥಾನವಾಗಿದೆ. ಹಿರಿಯರ ಪ್ರಕಾರ, ಮಹದೇಶ್ವರ ಮೊದಲು ಇಲ್ಲಿಗೆ ಬಂದು ನೆಲೆಯೂರಿ ನಂತರ ಇಲ್ಲಿಂದ ಮಿಕ್ಕ ಕಡೆಗೆ ಹೋಗಿ ನೆಲೆಸಿರುವುದು ಎಂಬ ಪ್ರತೀತಿ ಇದೆ. ಇದು ಹಳ್ಳಿಯ ಪಶ್ಚಿಮ ದಿಕ್ಕಿನಲ್ಲಿ ಊರಿನಿಂದ ಸ್ವಲ್ಪ

ಹೊರಭಾಗದಲ್ಲಿದೆ. ಇದು ಪೂರ್ವದಿಕ್ಕಿಗೆ ಮುಖಮಾಡಿದೆ. ಇಲ್ಲಿ ಮಹದೇಶ್ವರನ ಕಂಚಿನ ವಿಗ್ರಹವಿದೆ. ಹಾಗೆಯೇ ಶಿವನ ಲಿಂಗವೂ ಇದೆ. ಇಲ್ಲಿ ಒಂದು ಚಿಕ್ಕದಾದ ಗುಡಿಯಿತ್ತು., ಆದರೆ ಇತ್ತೀಚೆಗೆ ಇದನ್ನು ನಾಲ್ಕೂ ದಿಕ್ಕಿನಿಂದ ವಿಸ್ತರಿಸಲಾಗಿದೆ. ಇದರ ಗುಡಿಯಿಂದ ಸುಮಾರು ೨೦ ಅಡಿ ಮುಂದೆ ಬಸವಣ್ಣನ ವಿಗ್ರಹ ಮತ್ತು ಚಿಕ್ಕಗುಡಿ ಇದೆ. ಮಹದೇಶ್ವರ ದೇವರು ತುಂಬಾ ಪ್ರಸಿದ್ಧಿ ಪಡೆದಿದೆ. ಇದಕ್ಕೆ ಹಲವಾರು ಶತಮಾನಗಳಷ್ಟು ಹಳೆಯದಾಗಿದೆ. ಇಲ್ಲಿ ಪ್ರತಿದಿನವೂ ಪೂಜೆಗಳು ನಡೆಯುತ್ತಿರುತ್ತವೆ. ಆದರೆ ಹಬ್ಬ ಹರಿದಿನಗಳಲ್ಲಿ ವಿಶೇಷ ಪೂಜೆ, ಜಾತ್ರೆ ನಡೆಯುತ್ತದೆ, ಇಲ್ಲಿ ಮುಖ್ಯವಾಗಿ ದೀಪಾವಳಿ ಹಬ್ಬದ ಮಾರನೇ ದಿನ ಕೊಂಡೋತ್ಸವ ಹಾಗೂ ಜಾತ್ರೆ ಬಹಳ ಅದ್ಧೂರಿಯಾಗಿ ನಡೆಯುತ್ತದೆ. ಅಂದು ಅಕ್ಕಪಕ್ಕದ ಹಳ್ಳಿಗಳ ಸಮೇತ ಕ್ಯಾತನಹಳ್ಳಿಯವರೂ ಕೊಂಡದೇವರು ಕಟ್ಟಿ ಸೌದೆಯನ್ನು ಮಹದೇಶ್ವರ ದೇವಸ್ಥಾನದ ಪಕ್ಕದಲ್ಲಿರುವ ಕೊಂಡದಗುಳಿಯಲ್ಲಿ ಜೋಡಿಸಿ, ಅದಕ್ಕೆ ಬೆಂಕಿ ಹಚ್ಚಿ, ಕೊಂಡವನ್ನು ಸಿದ್ಧಗೊಳಿಸುತ್ತಾರೆ. ಜಾತ್ರೆ ದಿನ ಜನರು ತಮ್ಮ ದನಕರುಗಳನ್ನು, ಪ್ರಾಣಿಗಳನ್ನು ತಂದು ದೇವಾಲಯದ ಸುತ್ತ ಸುತ್ತಿಸಿ ತೀರ್ಥ ಪಡೆದು ಪಂಜನ್ನು ಹೊತ್ತಿಸಿ ಹೋಗುತ್ತಾರೆ. ನಂತರ ಕೊಂಡ ಹಾಯುವ ತುಂಬಾ ಮಡಿವಂತಿಕೆಯಿಂದ, ಹಸಿವಿನಿಂದ ಇದ್ದು ಕೊಂಡ ಹಾಯುತ್ತಾರೆ. ನಂತರ ಹರಕೆ ಹೊತ್ತವರು ಇಲ್ಲಿನ ಕೊಂಡಕ್ಕೆ ಗಂಧದ ಕಡ್ಡಿ, ಎಳ್ಳು, ಎಣ್ಣೆಯನ್ನು ಸುರಿಯುತ್ತಾರೆ. ಹಾಗೆಯೇ ಇಲ್ಲಿರುವ 'ಹುಲಿವಾಹನ'ವನ್ನು ಒತ್ತಿಕೊಂಡು ದೇವಸ್ಥಾನ ಹಾಗೂ ಕೊಂಡದ ಗುಳಿಯನ್ನು ಸುತ್ತಿಬರುವುದು ಜನರ ನಂಬಿಕೆ, ಹರಕೆ ತೀರಿಸುವ ಕ್ರಮವಾಗಿದೆ. ಈ ದೇವಾಲಯಕ್ಕೆ ಹಾಗೂ ಊರಿನೊಳಗಿರುವ ಬಸವೇಶ್ವರ ದೇವಾಲಯಗಳೆರಡಕ್ಕೂ ಒಟ್ಟಾಗಿ ಒಬ್ಬ ಪೂಜಾರಿಯನ್ನು ನೇಮಿಸಲಾಗಿದೆ. ಇವರು ಪ್ರತೀ ದಿನವೂ ಪೂಜೆ ಮಾಡುತ್ತಿದ್ದಾರೆ.

೨) **ಲಕ್ಷ್ಮೀಕಾಂತ ದೇವಾಲಯ:** ಇದು ಕ್ಯಾತನಹಳ್ಳಿಯಲ್ಲಿರುವ ಐತಿಹಾಸಿಕ ದೇವಾಲಯವಾಗಿದೆ. ಇದನ್ನು ಚೋಳರು ನಿರ್ಮಿಸಿದರೆಂಬ ಸಾಕ್ಷ್ಯಾಧಾರಗಳು ಸಿಕ್ಕಿವೆ. ಇದು ವಿಶಾಲವಾದ ದೇವಾಲಯ. ಇಲ್ಲಿ ಲಕ್ಷ್ಮೀಕಾಂತ, ಈಶ್ವರ ಬಸವಣ್ಣನ ದೇವಾಲಯಗಳಿಗೆ ಹಾಗೂ ವಿಗ್ರಹಗಳಿವೆ, ಹಿರಿಯರು ಹೇಳುವಂತೆ ಈ ದೇವಸ್ಥಾನದ ಬಗೆಗೆ ಒಂದು ಜನಪದ ಕಥೆಯೂ ಇದೆ.

ಒಮ್ಮೆ ಚೋಳ ವಂಶದವರು ಈ ಸ್ಥಳಕ್ಕೆ ಬಂದಾಗ ರಾಜನಿಗೆ ಕನಸ್ಸೊಂದು ಬಂದು, ಅದರಂತೆ ಈ ಸ್ಥಳದಲ್ಲಿ ಒಂದು ದೇವಸ್ಥಾನ ನಿರ್ಮಿಸಿದರೆ ರಾಜ್ಯಾಡಳಿತಕ್ಕೆ ಒಳ್ಳೆಯದಾಗುತ್ತದೆ ಎಂದು ಆ ಸ್ಥಳದಲ್ಲಿ ಈ ದೇವಾಲಯವನ್ನು ನಿರ್ಮಿಸಲಾಯಿತು. ಅದೂ ಒಂದೇ ರಾತ್ರಿಯಲ್ಲಿ ಇಡೀ ದೇವಾಲಯವನ್ನೇ ನಿರ್ಮಿಸಲಾಯಿತಂತೆ". ಇದು

ಇಲ್ಲಿನ ಭಾಗದ ಜನರ ಕಥೆಯಾಗಿದೆ. ಆದರೆ ಶಾಸನಗಳ ಪ್ರಕಾರ ಚೋಳರ ಕಲದಲ್ಲೇ ನಿರ್ಮಾಣವಾಗಿದೆ ಎಂದು ತಿಳಿದುಬರುತ್ತದೆ. ಇದನ್ನು ೨೦ ಅಡಿ ಎತ್ತರದ ದಿಬ್ಬದ ಮೇಲೆ ನಿರ್ಮಿಸಲಾಗಿದೆ. ಒಂದು ಎತ್ತರದ ಗೋಪುರ, ಹಾಗೆ ಪಕ್ಕದಲ್ಲಿ ವೃತ್ತಾಕಾರದ ಮತ್ತೊಂದು ಗೋಪುರ ಕಂಡುಬರುತ್ತದೆ. ಒಳಭಾಗದಲ್ಲಿ ಒಂದು ಬೃಹತ್ತಾದ ಕಾಣಿಕೆ ಹಾಕುವ ಹುಂಡಿ ಇದೆ. ಅದನ್ನು ಸುಮಾರು ೪೦೦ ವರ್ಷಗಳಿಂದ ತೆಗೆಯದೇ ಇಡಲಾಗಿತ್ತು. ಆದರೆ ಸುಮಾರು ೧೦ ವರ್ಷಗಳ ಹಿಂದೆ ಕಳ್ಳತನವಾಯಿತು. ದೇವಾಲಯದ ಮುಖ್ಯ ಗೋಪುರಕ್ಕೆ ಕಲ್ಲಿನ ಮೆಟ್ಟಿಲುಗಳಿವೆ ಇಲ್ಲಿ ಸುಂದರವಾದ ಕೆತ್ತನೆಗಳನ್ನು ಕಾಣಬಹುದಾಗಿದೆ. ಶಿಲಾಬಾಲಿಕೆಯರು, ದ್ವಾರದ ಮುಂದೆ ಎರಡು ಬೃಹತ್ ಕಲ್ಲಿನ ಆನೆಗಳಿವೆ. ಇವು ಇಡೀ ದೇವಸ್ಥಾನವನ್ನೇ ಎಳೆಯುತ್ತಿವೆ ಎಂಬಂತೆ ಭಾಸವಾಗುತ್ತದೆ. ಇತ್ತೀಚೆಗೆ ಇದು ಜೀರ್ಣೋದ್ಧಾರವನ್ನು ಪಡೆದಿದೆ. ಆದರೆ ಹಳೆಯ ಕೆಲ ಕೆತ್ತನೆಗಳು ಹಾಳಾಗಿದ್ದು, ಜೀರ್ಣೋದ್ಧಾರದ ವೇಳೆ ಅದೇ ಕೆತ್ತನೆಗಳನ್ನು ಉಳಿಸಿಕೊಳ್ಳದಿರುವುದು, ದೇವಾಲಯದ ಹಳೆಯ ವೈಭವ ಮಂಕಾಗಿ ಕಾಣುತ್ತದೆ. ಇಲ್ಲಿ ಈಗ ಒಬ್ಬ ಪೂಜಾರಿಯನ್ನು ಗ್ರಾಮದಿಂದ ನೇಮಿಸಲಾಗಿದ್ದು ದಿನವೂ ಇಲ್ಲಿ ಪೂಜೆ ನಡೆಯುತ್ತಿದೆ. ಇದನ್ನು ಪ್ರವಾಸಿ ತಾಣವಾಗಿ ಮಾಡಬಹುದು. ಆದರೆ ಇನ್ನೂ ಯಾರ ಗಮನಕ್ಕೂ ಬಿದ್ದಿಲ್ಲ.

೩) **ಮಾರಮ್ಮನ ಗುಡಿ:** ಈ ಗ್ರಾಮದಲ್ಲಿ ಮಿಕ್ಕ ದೇವಾಲಯಗಳಂತೆಯೇ ಮಾರಮ್ಮ ಗುಡಿ, ಮಾರಿಗುಡಿಯೂ ಪ್ರಮುಖ ದೇವಾಲಯ. ಈ ದೇವರನ್ನೂ ಸಹ ಮೇಲು–ಕೀಳೆಂಬ ಅಂತರದಿಂದ ನೋಡದೆ ಎಲ್ಲಾ ವರ್ಗದವರು ಆರಾಧಿಸುತ್ತಾರೆ. ಇದು ಒಂದು ಪುಟ್ಟ ಗುಡಿ ಇದನ್ನು ದುಂಡುಮಾರಮ್ಮ ಎಂದೂ ಕರೆಯುವರು. ಮಾರಮ್ಮ ದುಮಡಾಗಿರುವುದರಿಂದ ಹೀಗೂ ಕರೆಯುವುದುಂಟು. ಇದಕ್ಕೆ ಹೆಚ್ಚಾಗಿ ಬಲಿಕೊಡುತ್ತಾರೆ. ಹರಕೆ ಹೊತ್ತವರು ಕುರಿ, ಮೆಕೆ, ಕೋಳಿಯನ್ನು ಬಲಿ ನೀಡುವುದುಂಟು. ಇದು ಇಡೀ ಗ್ರಾಮವನ್ನೇ ಕಾಯುತ್ತಾಳೆಂದು ಇಲ್ಲಿನ ಜನ ನಂಬಿದ್ದಾರೆ. ಅನೇಕ ಕಾಯಿಲೆ ಕಸಾಲೆಗಳಿಗೆ ಈ ಮಾರಮ್ಮನೇ ವೈದ್ಯೆ, ದಡಾರವಾದಾಗ, ಅಮ್ಮವಾದಾಗ, ಈ ಮಾರಮ್ಮನ ಬಳಿ ಹೋಗುತ್ತಾರೆ. ವಿಶೇಷ ಹಬ್ಬಗಳ ದಿನದಂದು ಪೂಜೆ ನಡೆಯುತ್ತದೆ. ತಂಬಿಟ್ಟು ಈ ದೇವಿಗೆ ಇಷ್ಟವಾದ ಸಿಹಿ ತಿಂಡಿ. ಮಾರಮ್ಮಳಿಗೆ ಒಂದು ಕುಟುಂಬ ಪೂಜಾರಿಯನ್ನು ನೇಮಿಸಿದೆ. ಇಲ್ಲಿ ಮುಖ್ಯವಾಗಿ 'ಎರ್ಚ್‌ಗುಳಿ' ಎಂಬ ವಿಶೇಷ ಸಂಪ್ರದಾಯ ಆಚರಣೆ ಕಂಡುಬರುತ್ತದೆ. ದೇವಿಗೆ ಕುರಿ ಬಲಿನೀಡಿ ಅದರ ರಕ್ತವನ್ನು ಅನ್ನಕ್ಕೆ ಕಲಸಿ ನೈವೇದ್ಯ ಮಾಡಿ ದೇವಿಗೆ ಅದನ್ನು ಇಡೀ ಹಳ್ಳಿಗೇ ಎರಚುವುದು ವಿಶೇಷವಾದ ಆಚರಣೆಯಾಗಿ ಕಂಡುಬರುತ್ತದೆ.

ಈ ಸಂಪ್ರದಾಯವು ಹಲವಾರು ದಶಕಗಳಿಂದ ನಡೆದುಕೊಂಡು ಬರುತ್ತಿದೆ. ಮಾರಿಹಬ್ಬಕ್ಕೆ ಮೂರುದಿನಗಳು ಬಾಕಿ ಇರುವಂತೆ ಈ ಕುಟುಂಬದ ಯಾರಾದರೂ ಒಬ್ಬ ಪುರುಷರು ವ್ರತ, ಉಪವಾಸ, ನೀತಿ ನಿಯಮಾವಳಿಗಳಿಂದ ಆಚರಣೆ ಮಾಡಿ ಹಬ್ಬದ ದಿನ ಭಕ್ತಿಯಿಂದ 'ಎರ್ಜ್‌ಗುಳಿ'ಯನ್ನು ಮಾಡುತ್ತಾರೆ. ಅವರಿಗೆ ಎಷ್ಟು ಆಯಾಸವಿದ್ದರೂ, ಹಬ್ಬದದಿನ ಅದ್ಯಾವುದೂ ಅವರಿಗೆ ತಿಳಿಯುವುದೂ ಇಲ್ಲವಂತೆ. ಮಹದೇಶ್ವರನು ಊರ ಮುಂದೆ ಕಾವಲಿದ್ದರೆ ಮಾರಮ್ಮ ಊರಿನ ಹಿಂದೆ ಕಾವಲು ಕಾಯುತ್ತಿರುತ್ತಾಳೆ ಎಂಬುದು ಇಲ್ಲಿನ ನಂಬಿಕೆ.

**೪) ಸಿದ್ದಪ್ಪಾಜಿ ದೇವಸ್ಥಾನ:** ಕ್ಯಾತನಹಳ್ಳಿ ಗ್ರಾಮದಲ್ಲಿ ಮುಖ್ಯವಾದ ಮತ್ತೊಂದು ದೇವಾಲಯ. ಇದು ಊರಿನಿಂದ ಸುಮಾರು ಅರ್ಧ ಮೈಲುಗಳಷ್ಟು ದೂರದಲ್ಲಿದೆ. ಇದನ್ನು ಕುರುಬ ಜನಾಂಗವು ಹೆಚ್ಚಾಗಿ ಆರಾಧನೆ ಮಾಡುತ್ತದೆ. ದೀಪಾವಳಿಯ ವೇಳೆ ಈ ದೇವರ ಉತ್ಸವ ನಡೆಯುತ್ತದೆ. ಈ ದೇವಸ್ಥಾನವು ತುಂಬ ಹಳೆಯದಾಗಿದ್ದು, ಆದುದರಿಂದ ಇಲ್ಲಿನ ಬೆಲೆಬಾಳುವ ವಸ್ತುಗಳನ್ನು ಊರೊಳಗೆ ಇಟ್ಟಿದ್ದಾರೆ. ಇಲ್ಲಿನ ಸಿದ್ದಪ್ಪಾಜಿ ಮಾತ್ರ ನೆಲೆಸಿದ್ದಾರೆ. ಈ ದೇವರೂ ಕೂಡ ತುಂಬಾ ಶಕ್ತಿವಂತ ದೇವರೆಂದು ಭಕ್ತರು ನಂಬಿದ್ದಾರೆ. ದೀಪಾವಳಿ ಹಬ್ಬದ ವೇಳೆ ಮಹದೇಶ್ವರ ಹಾಗೂ ಲಕ್ಷ್ಮೀಕಾಂತ ದೇವರುಗಳಿಗೆ ಎಷ್ಟು ಗೌರವ, ಭಕ್ತಿಯಿಂದ ನಡೆದುಕೊಳ್ಳುತ್ತಾರೋ, ಅಷ್ಟು ಭಕ್ತಿಯನ್ನು ಸಿದ್ಧಪ್ಪಾಜಿಗೂ ನೀಡುತ್ತಾರೆ. ದೀಪಾವಳಿಯ ಆಲರವಿಯ ರಾತ್ರಿ ಹಲಗೆಕಟ್ಟಿ ಮೆರವಣಿಗೆ ಹೊರಟಾಗ ಭಕ್ತರು ತಮ್ಮ ಕಾಯಿಲೆ, ರೋಗರುಜಿನಗಳು, ಕಷ್ಟಗಳ ಪರಿಹಾರಕ್ಕೆಂದು ಬೀದಿಗಳಲ್ಲಿ ಮಲಗುತ್ತಾರೆ. ಆಗ ಹಲಗೆಕಟ್ಟಿರುವವರು ಅವರನ್ನು ದಾಟಿಕೊಂಡು ಹೋಗುವುದುಂಟು.

**೫) ಬಸವೇಶ್ವರ ದೇವಾಲಯ:** ಇದು ಲಿಂಗಾಯಿತ ಸಮುದಾಯದ ಆರಾಧನೆಯ ದೇವಸ್ಥಾನ. ಇದರ ಒಂದು ವಿಶೇಷವೆಂದರೆ ಹಲವಾರು ಕಾರಣಗಳಿಂದ ಈ ದೇವಾಲಯವು ಮುಚ್ಚಲ್ಪಟ್ಟಿತ್ತು. ಮತ್ತೊಂದು ವಿಶೇಷವೆಂದರೆ ಈ ದೇವಸ್ಥಾನ ಪರಿಶಿಷ್ಟ ಜಾತಿಯವರು ವಾಸಿಸುವ ಸ್ಥಳದಲ್ಲಿದೆ. ಇದನ್ನು ಈಗ ಜೀರ್ಣೋದ್ಧಾರ ಗೊಳಿಸಿ, ಬಸವೇಶ್ವರ, ಗಣಪತಿ, ಈಶ್ವರ ದೇವರನ್ನು ಪ್ರತಿಷ್ಠಾಪಿಸಿದ್ದಾರೆ. ಅಂದಿನಿಂದ ಮಾದೇಶ್ವರ ದೇವಾಲಯದ ಅರ್ಚಕರೇ ಇಲ್ಲಿಯೂ ಪೂಜೆ ಮಾಡುತ್ತಿದ್ದಾರೆ. ನೋಡಲು ತುಂಬಾ ಚಿಕ್ಕದೆನಿಸಿದರೂ, ಆಧುನಿಕವಾಗಿ ಕಟ್ಟಿದ್ದಾರೆ.

**೬) ಶ್ರೀರಾಮಮಂದಿರ:** ಗ್ರಾಮದಲ್ಲಿ ರಾಮಮಂದಿರವಿದ್ದು, ಇದು ವಿಶೇಷದಿನಗಳಂದು ಮಾತ್ರ ತೆರೆದಿರುತ್ತದೆ. ವಿಶೇಷ ದಿನಗಳಲ್ಲಿ ಪೂಜೆ ನಡೆಯುತ್ತದೆ. ಈ

ದೇವಾಲಯವನ್ನು ಇಂತವರೇ ಕಟ್ಟಿಸಿದ್ದಾರೆಂದು ಯಾರಿಗೂ ಗೊತ್ತಿಲ್ಲ. ಆದರೆ ಊರಿನಲ್ಲಿ ಶತಮಾನದ ಹಿಂದೆ ಹಿರಿಯರು ಕಟ್ಟಿಸಿದ್ದರಂತೆ. ಇಲ್ಲಿ ಈಗ ವಿಗ್ರಹಗಳೂ ಕೂಡ ಇಲ್ಲದಂತಾಗಿದೆ. ಕೇವಲ ರಾಮನ ಚಿತ್ರಗಳು ಮಾತ್ರ ಇದ್ದು ಅದಕ್ಕೆ ಪೂಜೆ ಮಾಡುತ್ತಾರೆ. ಈ ಮಂದಿರವನ್ನು ಐತಿಹಾಸಿಕ, ಪೌರಾಣಿಕ ನಾಟಕಗಳನ್ನು ಕಲಿಯಲು ಬಳಸಿಕೊಳ್ಳುತ್ತಾರೆ. ಪೂಜೆ ಆಗುತ್ತಿದ್ದಂತೆ ಹಲವಾರು ಹಿರಿಯರು ಈ ದೇವಸ್ಥಾನದ ಮುಂದೆ ಬಂದು ಕುಳಿತು, ಆಯಾಸ ನಿವಾರಣೆಮಾಡಿಕೊಳ್ಳುತ್ತಾರೆ. ಅಯ್ಯಪ್ಪನ ಮಾಲೆ ಹಾಕಿಸಿಕೊಂಡ ವೇಳೆಯಲ್ಲಿ, ಸ್ವಾಮಿಗಳೆಲ್ಲರೂ ಇದೇ ಮಂದಿರಲ್ಲಿ ತಂಗುತ್ತಾರೆ. ಕೊನೆಯ ದಿನ ಇರುಮುಡಿ ಕಟ್ಟುವಾಗಲೂ, ಪೂಜೆ ಪುನಸ್ಕಾರ ಮಾಡುವಾಗ ಇದೇ ಮಂದಿರದಲ್ಲಿ ನಡೆಸುತ್ತಾರೆ.

ಒಟ್ಟಾರೆಯಾಗಿ ಇಲ್ಲಿನ ದೇವಾಲಯಗಳಲ್ಲಿ ನಡೆಯುವ ಪ್ರತಿಯೊಂದು ಧಾರ್ಮಿಕ ಆಚರಣೆಯಲ್ಲಿ ಜನರು ಪಾಲ್ಗೊಂಡು ಸಹಕಾರ ಸಹಬಾಳ್ವೆಯಿಂದ ಧಾರ್ಮಿಕ ವಿಧಿ ವಿಧಾನಗಳನ್ನು ನಡೆಸುತ್ತಾರೆ. ಸಂಬಂಧಗಳು ಗಟ್ಟಿಗೊಳ್ಳುವುದು ಈ ರೀತಿಯ ಧಾರ್ಮಿಕ ಆಚರಣೆಗಳಿಂದ ಮಾತ್ರ ಸಾಧ್ಯ. ಪ್ರತಿ ವರ್ಷ ತಪ್ಪದೇ ಹಬ್ಬ ಜಾತ್ರೆಗಳನ್ನು ಮಾಡುತ್ತಿದ್ದಾಗ ಮನುಷ್ಯ ತನ್ನ ಸಂಬಂಧಗಳನ್ನು ಗಟ್ಟಗೊಳಿಸಿ-ಕೊಳ್ಳುವುದಕ್ಕೋಸ್ಕರ ತಮ್ಮ ತಮ್ಮಲ್ಲಿ ಪ್ರೀತಿ ವಿಶ್ವಾಸ ಹೆಚ್ಚಾಗಿ ಅವನ ಬದುಕಿನಲ್ಲಿ ಸಂತೋಷದ ಛಾಯೆ ಮೂಡಲೆಂದು ಜಾತ್ರೆಗಳಂತಹ ಆಚರಣೆಗಳನ್ನು ಆಚರಿಸುತ್ತಾ ಬಂದಿದ್ದಾನೆ. ಇಂತಹ ಸಂದರ್ಭದಲ್ಲಿ ಕ್ಯಾತನಹಳ್ಳಿಯ ಜನತೆ ಆಧುನಿಕತೆಯ ಪ್ರವೇಶದಿಂದಾಗಿ ನಾಗರಿಕ ಪ್ರಜ್ಞೆ ಹೊಂದಿದವರಂತೆ ಕಾಣುತ್ತಾರೆ. ಏಕೆಂದರೆ ಹಿಂದೆ ಇದ್ದಂತಹ ಅನೇಕ ಸಂಪ್ರದಾಯ ಆಚರಣೆಗಳನ್ನು ಅವರು ಆದಷ್ಟು ಬಿಟ್ಟು ಹೊರಬರುವಂತಹ ಪ್ರಯತ್ನ ಮಾಡಿದ್ದಾರೆ. ಹಿಂದೆ ಇದ್ದ ಅನೇಕ ರೀತಿಯ ಆಚರಣೆಗಳಲ್ಲಿದ್ದ ಮೌಢ್ಯತೆ ಸಂಪ್ರದಾಯಗಳನ್ನು ಸಂಪೂರ್ಣವಾಗಿ ಮುರಿದಿದ್ದರೂ ಸಹ ಅದರಲ್ಲಿರುವಂತಹ ಕೆಲವು ಕೆಟ್ಟ ರೀತಿಯ ಆಚರಣೆಗಳನ್ನು ಬಿಟ್ಟು ಒಳ್ಳೆಯ ರೀತಿಯಲ್ಲಿ ಯಾವುದು ಉತ್ತಮ ಎಂದು ತಿಳಿದು ಆಚರಿಸುತ್ತಿದ್ದಾರೆ. ಮನುಷ್ಯ ಜಾಗೃತನಾದಂತೆ ಅವನಲ್ಲಿ ಅಪಾರವಾಗಿ ಮೌಢ್ಯತೆ ನಶಿಸುತ್ತಾ ಹೋಗುತ್ತದೆ. ಅದೇ ರೀತಿ ಮಾನವನ ಜೀವನದಲ್ಲಿ ದೇವರ ಬಗ್ಗೆ ಇರುವಂತಹ ಕಲ್ಪನೆ, ಭಕ್ತಿ ಅಪಾರ ಪ್ರಮಾಣದಲ್ಲಿ ಇಲ್ಲದೆ ಅದು ಸ್ವಲ್ಪ ಪ್ರಮಾಣದಲ್ಲಿದೆ. ವೈಜ್ಞಾನಿಕ ತಿಳುವಳಿಕೆಯ ಮೂಲಕ ಅದನ್ನು ಅರ್ಥೈಸುವ ಪ್ರಯತ್ನ ಮಾಡುತ್ತಿದ್ದಾನೆ.

ಉದಾಹರಣೆಗೆ: ಬಸವೇಶ್ವರ ದೇವಾಲಯವು ಅನೇಕ ವರ್ಷಗಳಿಂದ ಮುಚ್ಚಲ್ಪಟ್ಟಿತ್ತು. ಪ್ರಮುಖ ಕಾರಣ ಅದು ದಲಿತಕೇರಿಯಲ್ಲಿದ್ದವರಿಂದಾಗಿ ಹಿಂದೆ

ಮನಸ್ತಾಪಗಳಿಂದ ಅದು ಇದ್ದರೂ ಇಲ್ಲವಾದಂತಾಗಿತ್ತು. ಆದರೆ ಕ್ಯಾತನಹಳ್ಳಿಯ ಜನರ ವಿಶಾಲಮನೋಭಾವನೆ-ಗಳಿಂದಾಗಿ, ಆಧುನೀಕತೆಯ ಸ್ಪರ್ಶದಿಂದ ಇಂದು ಅದು ಜೀರ್ಣೋದ್ಧಾರವಾಗಿ ಮತ್ತೆ ಪೂಜೆಗಳು ನಡೆಯುತ್ತಿವೆ. ಒಂದು ಗ್ರಾಮದಲ್ಲಿ ಎಲ್ಲಾ ವರ್ಗದ ಜನರು ವಾಸಿಸುತ್ತಿರುವಾಗ ಅವರವರ ಇಷ್ಟ ದೈವದ ಪೂಜೆಗೆ ಯಾರಿಂದಲೂ ಅಡಚಣೆ ಮಾಡಲು ಸಾಧ್ಯವಿಲ್ಲ. ಅಂತೆಯೇ ಇಲ್ಲಿ ಒಂದೊಂದು ಕೋಮಿನ ಜನರು ತಮ್ಮ ಇಷ್ಟವಾದ ದೈವಪೂಜೆಯಲ್ಲಿ ತೊಡಗಿದ್ದಾರೆ. ಇದು ಇವರುಗಳು ಈಗ ಮಾಡಿಕೊಂಡಂತಹ ಆಚರಣೆಗಳಲ್ಲ. ಹಲವಾರು ತಲೆಮಾರುಗಳಿಂದ ನಡೆದುಬಂದಂತಹ ಆಚರಣೆಗಳು, ಸಂಪ್ರದಾಯಗಳಾಗಿವೆ. ದೇವರ ಹೆಸರಿನಲ್ಲಿ ಬಲಿಕೊಡುವ ಪದ್ಧತಿಯೂ ಇಲ್ಲಿ ಕಂಡುಬರುವುದು ವಿಷಾದನೀಯ ಸಂಗತಿಯಾಗಿದ್ದರೂ ಕೂಡ, ಅದನ್ನು ಇವರು ಪಾಪದ ಕೆಲಸವೆಂದು ತಿಳಿದಾಗ ಮಾತ್ರ ಇಂತಹ ಪದ್ಧತಿಗಳು ನಿಲ್ಲಲು ಸಾಧ್ಯವಾಗುತ್ತದೆ.

ಇಲ್ಲಿನ ದೇವಾಲಯಗಳ ಮತ್ತೊಂದು ವಿಶೇಷವೆಂದರೆ ಇಲ್ಲಿನ ಮಹದೇಶ್ವರ ದೇವಸ್ಥಾನ, ಸಿದ್ಧಪ್ಪಾಜಿ ದೇವಸ್ಥಾನ, ಮಾರಮ್ಮನ ಗುಡಿ, ಬಸವೇಶ್ವರನ ದೇವಾಲಯ, ಲಕ್ಷ್ಮೀಕಾಂತ ದೇವಾಲಯಗಳಿಗೆ ಊರಿನ ಎಲ್ಲಾ ಕೋಮಿನ, ವರ್ಗದ ಭಕ್ತರೂ ಭೇಟಿನೀಡುತ್ತಾರೆ, ಪೂಜಿಸುತ್ತಾರೆ. "ಸಂಕಟಬಂದಾಗ ವೆಂಕಟರಮಣ" ಎನ್ನುವಂತೆ ಒಂದು ದೇವರ ಬಳಿ ತಾವು ಪ್ರಾರ್ಥಿಸಿದ್ದು ಈಡೇರದಿದ್ದಾಗ ಮತ್ತೊಂದು ದೇವರ ಹತ್ತಿರ ಹರಕೆ ಕಟ್ಟಿಕೊಳ್ಳುವುದು ಇಲ್ಲಿ ಕಂಡುಬರುತ್ತದೆ. ಇದರಿಂದಲೇ ಏನೋ ಊರಿನ ಜನರೆಲ್ಲ ಪ್ರತಿ ದೇವರ ಪೂಜೆಯನ್ನು ಮಾಡುತ್ತಾರೆ.

# ಅಧ್ಯಾಯ – ೪
# ಜಾನಪದ ಕಲೆಗಳು

ಜಾನಪದ ಕಲೆಗಳು ಎಲ್ಲಿ, ಯಾವಾಗ ಹುಟ್ಟಿದವು ಎಂಬುದನ್ನು ಹೇಳುವುದು ಕಷ್ಟ. ಇವು ಮಾನವನಷ್ಟೇ ಪುರಾತನವಾದವು. ತನ್ನ ಸುತ್ತಮುತ್ತಲಿನ ಪರಿಸರ ಸಮಾಜವನ್ನು ಅನುಕರಿಸಿದ ಮಾನವ, ಭಾವದ ಮೈದೋರಿ ಬಂದು ತನ್ನ ಅನಿಸಿಕೆಗಳನ್ನು ಹಾವ, ಭಾವಗಳಲ್ಲಿ ವ್ಯಕ್ತಪಡಿಸಲಾರಂಭಿಸಿದ್ದು, ಈ ಹಾವಭಾವಗಳು ಕಾಲಾಂತರದಲ್ಲಿ ಸ್ಥಿತ್ಯಂತರ ಪಡೆದುಕೊಂಡು ಸ್ಪಷ್ಟ ರೂಪಕ್ಕೆ ಬಂದಿರುವ ಸಾಧ್ಯತೆ ಇದೆ.

"ಮಾನವನು ಆದಿಮ ಕಾಲದಿಂದಲೂ ಪ್ರಾಣಿ, ಪಕ್ಷಿ ಮತ್ತು ಪ್ರಕೃತಿಯೊಡನೆ ಸೆಣಸಾಡುತ್ತಾ ಆಶ್ಚರ್ಯಪಡುತ್ತಾ, ಸಂತೋಷಪಡುತ್ತಾ, ಅನುಕರಣೆ ಮಾಡುತ್ತಾ ಅರಿವಿಗೆ ಬಂದಂತೆಲ್ಲಾ ಧಾರ್ಮಿಕ ವಿಧಾನಗಳನ್ನು ಸಹ ಕಲೆಯಾಗಿ ರೂಪಿಸುತ್ತಾ ಬಂದ. ಮನುಷ್ಯನ ಅಂತರಂಗವೇ ಕಲೆಯೊಡನೆ ಸಮ್ಮಿಳನಗೊಂಡಿದ್ದು ಅದನ್ನು ತಿದ್ದುತ್ತಾ, ತೀಡುತ್ತಾ ಕಲೆಗೊಂದು ರೂಪಕೊಟ್ಟನು. ಒಟ್ಟಿನಲ್ಲಿ 'ವಿಜ್ಞಾನ ದಯಪಾಲಿಸಿರುವ ಮನೋರಂಜನೆಗಳಾವುವೂ ಇರದ ಕಾಲದಲ್ಲಿ ದುಡಿಮೆಯ ಏಕತಾನವನ್ನು ಮುರಿದು ಶ್ರಮವನ್ನು ಮರೆತು, ಖುಷಿಯನ್ನು ಕಂಡುಕೊಳ್ಳಲು ನಮ್ಮ ಜನರು ತಮ್ಮ ಸೃಜನಶೀಲ ಪ್ರತಿಭೆಯಿಂದ ಕಲೆಗಳನ್ನು ಸೃಷ್ಟಿಸಿದರು. ಸಮೂಹ ಅವುಗಳನ್ನು ಬೆಳೆಸಿತು.

ಮನುಷ್ಯ ಬದುಕಿನ ಭಾವಾನುಭವಗಳು, ಮಾನವೀಯ ಸಂವೇದನೆಗಳನ್ನು ಅತ್ಯಂತ ತೀವ್ರವಾಗಿ ಪರಿಚಯಿಸುವ ಕಲೆಗಳು ಒಂದು ದೇಶದ ಒಂದು ಜನಾಂಗದ ಅಪ್ಪಟ ಸಂಸ್ಕೃತಿಯನ್ನು ಪ್ರತಿನಿದಿಸುತ್ತವೆ. ಯಾವುದೇ ಜನಾಂಗದ ಆಚಾರ–ವಿಚಾರಗಳು, ರೂಢಿ ನಡಾವಳಿಗಳು, ಸಂಪ್ರದಾಯ ಪರಂಪರೆಗಳನ್ನು ಆಯಾ ಜನಾಂಗದಲ್ಲಿ ರೂಪುಗೊಂಡ ಕಲೆಗಳು ಪ್ರತ್ಯಕ್ಷೀಕರಿಸುವುದರಿಂದ ಜನಜೀವನಕ್ಕೂ ಕಲೆಗಳಿಗೂ ಬಿಡಿಸಲಾಗದ ನಂಟು.

ನಿಸರ್ಗದ ವಿರುದ್ಧ ಅಸ್ತಿತ್ವಕ್ಕಾಗಿ ನಡೆಸಿದ ಹೋರಾಟದಲ್ಲಿ ಮನುಷ್ಯ ರೀತಿಯ ಆತಂಗ, ತಲ್ಲಣಗಳಿಂದ ಪಾರಾಗಲು ದೈವಾರಾಧನೆಯನ್ನು ತನ್ನ ಮಾನಸಿಕ ನೆಮ್ಮದಿಗಾಗಿ ಆಯ್ದುಕೊಂಡ ದೈವಧರ್ಮಗಳ ಅಂಟಿನೊಂದಿಗೆ ಕಲೆಗಳ ನಂಟು ಬೆಳೆದುಬಂದಿತು. ಮನಸ್ಸಿಗೆ ನೆಮ್ಮದಿ, ಆಹ್ಲಾದವನ್ನು ತಂದುಕೊಡುವ ಈ ಕಲೆಗಳು ಸಾಮೂಹಿಕವಾಗಿ ಸಾರ್ವತ್ರಿಕ ಸ್ವರೂಪವನ್ನು ಪಡೆದುಕೊಂಡವು.

ಸಾಮಾನ್ಯವಾಗಿ ಕಲೆಗಳು ಬಹಳಷ್ಟು ಹಿಂದಿನಿಂದಲೂ ಜನರಿಗೆ ಮನರಂಜನೆ-ಯನ್ನು ಒದಗಿಸಿಕೊಡುವುದರ ಜೊತೆಗೆ ಪುರಾಣ ನೀತಿ ಕಥೆಗಳನ್ನು ಕಲಾ ಮಾಧ್ಯಮದ ಮೂಲಕ ಅಭಿವ್ಯಕ್ತಿಸುತ್ತ ಬಂದಿವೆ. ಜನಜೀವನದ ಅವಿಭಾಜ್ಯ ಅಂಗವಾಗಿರುವ ಜನಪದ ಕಲೆಗಳು ಕೇವಲ ಮನರಂಜನೆ, ಪುರಾಣ, ನೀತಿಕಥೆಗಳ ಅಭಿವ್ಯಕ್ತಿಗಳಷ್ಟು ಮೀಸಲಾಗದೆ ಜನಪದರ ಬದುಕಿನ ನಾಡಿಯ ಮಿಡಿತಗಳೂ ಆಗಿವೆ. ಅವರ ನೋವು ನಲಿವುಗಳೊಂದಿಗೆ, ಆಸರಿಕೆ ಬೇಸರಿಕೆಗಳೊಂದಿಗೆ ಬದುಕಿನುದ್ದಕ್ಕೂ ಸ್ಪಂದಿಸುತ್ತಾ ಬಂದಿವೆ. ಒಂದು ಮಾತಿನಲ್ಲಿ ಹೇಳುವುದಾದರೆ ಜನಪದರ ಬದುಕೇ ಒಂದು ಕಲೆ. ಅವರ ಜೀವನದ ಪದರ ಪದರಗಳಲ್ಲಿ ಹರಡಿಕೊಂಡು ಜೀವನೋತ್ಸಾಹವನ್ನು ಪ್ರತಿಕ್ಷಣಕ್ಕೂ ಉಕ್ಕಿಸುತ್ತಲಿದೆ. ಮೈಸೋತು ಮನಸೋತ ಬರಡು ಬದುಕಿನಲ್ಲಿಯೂ ಸಹ ತಮ್ಮ ಸರಳವಾದ, ನೇರವಾದ, ಆಕರ್ಷಕ ಗುಣಗಳಿಂದ ಜನರ ಮನಸ್ಸನ್ನು ಜುಮುಗುಟ್ಟಿಸುತ್ತದೆ. ಸಾಮಾಜಿಕವಾಗಿ ಪರಸ್ಪರ ಸ್ನೇಹ, ವಿಶ್ವಾಸ, ಸೌಹಾರ್ದತೆಗಳನ್ನು ಹೆಚ್ಚಿಸುವುದರ ಮೂಲಕ ಅಸಮಾನತೆಯನ್ನು ನಿರಾಕರಿಸುವ ಪ್ರಯತ್ನವನ್ನೂ ಮಾಡುತ್ತಿವೆ. ಈ ಜನಪದ ಕಲೆಗಳಲ್ಲಿ ಅನೇಕ ಅಂಶಗಳಿವೆ. ಜಾನಪದ ಸಂಸ್ಕೃತಿಗೆ ಹಳ್ಳಿಗಳೇ ಜನ್ಮಸ್ಥಳಗಳು. ಹಳ್ಳಿಗರೇ ಜನ್ಮದಾತರು ಎಂಬುದು ಸತ್ಯವಾದುದಾಗಿದ್ದು, ಅಂತಹ ಹಳ್ಳಿಗಳಲ್ಲಿ ಕ್ಯಾತನಹಳ್ಳಿಯೂ ಒಂದಾಗಿದೆ. ಇಲ್ಲಿ ಅನೇಕ ಜಾನಪದ ಕಲೆಗಳು ಕಂಡುಬರುತ್ತವೆ. ಅಂತಹ ಹಲವಾರು ಅಂಶಗಳನ್ನು ಇಲ್ಲಿ ನೋಡಬಹುದಾಗಿದೆ. ಅವುಗಳೆಂದರೆ

೧) ಜನಪದಗೀತೆಗಳು

೨) ಜನಪದ ಕಥೆಗಳು

೩) ಒಗಟುಗಳು

೪) ಗಾದೆಗಳು

೫) ಜನಪದ ವೈದ್ಯ

೬) ಜನಪದ ಅಡುಗೆ

೭) ದೊಡ್ಡಾಟ

೮) ಸಣ್ಣಾಟ

೯) ಬಯಲಾಟಗಳು

೧೦) ಜನಪದ ಆಟಗಳು

೧೧) ಕೋಲಾಟ

೧೨) ರಂಗದ ಕುಣಿತ

೧೩) ವೀರಗಾಸೆ

೧೪) ನಂದಿಕಂಬದ ಕುಣಿತ

೧೫) ಜನಪದ ಭಾಷೆ

೧) ***ಜನಪದ ಗೀತೆ:** ಜಾನಪದ ಸಾಹಿತ್ಯದಲ್ಲಿ ಅತಿ ಮುಖ್ಯವಾಗಿ ಕಂಡುಬರುವ ಒಂದು ಭಾಗವೇ ಜನಪದ ಗೀತೆ. ಹಳ್ಳಿಗಳಲ್ಲಿ ಇಡೀ ವರ್ಷವೂ ಜನಪದ ಗೀತೆಗಳನ್ನು ಹಾಡುತ್ತಾ ಸಂಭ್ರಮಾಚರಣೆ ಮಾಡುತ್ತಿರುತ್ತಾರೆ. ಕೊಯ್ಲಿನ ಸಂದರ್ಭದಲ್ಲಿ, ಮದುವೆ ಸಂದರ್ಭದಲ್ಲಿ, ಹಬ್ಬ-ಹರಿದಿನಗಳಲಿ, ಹುಡುಗಿಯರು ಮೈನೆರೆದಾಗ, ಮಕ್ಕಳನ್ನು ಹೆತ್ತಾಗ, ಹೀಗೆ ಅನೇಕ ಸಂದರ್ಭಗಳಲ್ಲಿ ಜನಪದ ಗೀತೆಗಳು ಹೇಳಲ್ಪಡುತ್ತವೆ. ಇವು ಬೆಳಿಗ್ಗೆಯಿಂದ ಕಷ್ಟಪಟ್ಟು ಬೆವರು ಹರಿಸಿ ದುಡಿದು, ಸಂಜೆಯ ವೇಳೆ ವಿರಮಿಸುವ ಸಂದರ್ಭದಲ್ಲಿ ಸಂತೋಷವನ್ನು ಹಂಚಿಕೊಳ್ಳಲು ಹೇಳುತ್ತಾರೆ. ಇತ್ತೀಚೆಗೆ ಗಮನಿಸಬಹುದಾದಂತ ಹಿರಿತಲೆಗಳು ಇರುವಲ್ಲಿ ಮಾತ್ರ ಇಂತಹ ಜನಪದ ಗೀತೆಗಳನ್ನು ಕಾಣಬಹುದು, ಕೇಳಬಹುದಾಗಿದೆ.

**ಉದಾಹರಣೆಗೆ:** ಇಲ್ಲಿ ದೇವರ ಗೀತೆಗಳನ್ನು ನೋಡಬಹುದು. ದೇವರ ಪೂಜೆಯ ವೇಳೆ ಮಂಗಳಾರತಿ ವೇಳೆ ಹೇಳುವ ಗೀತೆ.

ಮಂಗಳ ಮೈವೇ ಲಿಂಗದ ರೂಪು
ಸಂಗಮೇಶ್ವರ, ಮಾದೇವ
ಗುರುಸಂಗಮೇಶ್ವರ ಮಾದೇವ
ಲಿಂಗದ ವರಗಳ ಕರುಣೀಸಯ್ಯ
ಬಲ ಚಂದಿರ ಮಾದೇವ

**ಜುಂಜಪ್ಪನ ಒಕ್ಕಲು ಪಡೆದು ಹಾಡು-**

ಜುಜೇಗೌಡನ ಕಣದಲ್ಲಿ ಹೋಗಿ ನಿಂತವು ಮಾದೇವ
ಮುತ್ತಿನ ಜೋಳಿಗೆಯ ಮುಂಗೈಯ್ಲಿ ಇಟ್ಕಂಡು
ಬಿಳಿಬೆತ್ತವ ಕೈಯಲ್ಲಿ ಇಡ್ಕೊಂಡು
ಹುಲಿಯ ಹುತ್ತವ ಮಾಡಿಕೊಂಡು
ಕಣದಲ್ಲಿ ಹೋಗಿ ನಿಂತವು

**ಮಳೆಗೆ ಸಂಬಂಧಿಸಿದ ಜನಪದ ಗೀತೆ:**

ಒಕ್ಕಲಗೇರ‍್ಯಾಗ ಮಳಿರಾಜಾ ಅವರು
ಮಕ್ಕಳ ಮಾರ‍್ಯಾರ ಮಳಿರಾಜಾ
ಮಕ್ಕಳ ಮಾರೀ ಕೊಕ್ಕಿನ ಹಿಡಕೊಂಡು
ಭತ್ತಂಥ ತಿರಿಗ್ಯಾರ ಮಳಿರಾಜ

**ಮಗನ ಮೇಲಿನ ಪ್ರೀತಿಯ ಒಂದು ಗೀತೆ:**

ತೋಳುದ್ದ ತಲೆದಿಂಬು ಮಾರುದ್ದ ಹಾಸಿಗೆ
ಮಾಣಿಕ್ಯದಂಥ ಮಗ ಮುಂದೆ ಮಲಗಿರಲು ಮಾರಾಯ್ತಗೊಡವಿ ನನಗೇನು



**ಲಾಲಿಯ ಪದಗಳು:**

ಆಡಿ ಬಾ ನನ್ನಯ್ಯ ಅಂಗಾಲ ತೊಳೆದೇನು
ತೆಂಗಿನ ಕಾಯಿ ತಿಳಿನೀರ ತಕ್ಕೊಂಡು
ಬಂಗಾರದ ಮಾರೀ ತೊಳೆದೂನ

**ಬೀಸುವ ಪದ:**

ಕಲ್ಲಮ್ಮ ತಾಯಿ ಮೆಲ್ಲಮ್ಮ ರಾಗೀಯೂ
ಜಲ್ಲ ಜಲ್ಲಾನೆ ಉದರವ್ವ, ನಮ್ಮನೆ
ಬೆಲ್ಲದಾರುತಿಯ ಬೆಳಗೇವು

**೨) ಜನಪದ ಕಥೆ:** ಜನಪದ ಕಥೆಯೂ ಸಹ ಜಾನಪದ ಸಾಹಿತ್ಯದಲ್ಲಿ ಪ್ರಮುಖವಾಬ ಒಂದು ಭಾಗವಾಗಿದೆ. ಮೌಖಿಕವಾಗಿ ಒಬ್ಬರಿಂದ ಒಬ್ಬೊಬ್ಬರಿಗೆ ಸಂಚರಿಸುತ್ತವೆ. ಕ್ಯಾತನಹಳ್ಳಿಯಲ್ಲಿ ಊರು ಹೇಗೆ ಕಟ್ಟಲ್ಪಟ್ಟಿತ್ತು, ಅಲ್ಲಿನ ಆರಾಧ್ಯ ದೈವ ಮಾದೇಶ್ವರ ಹೇಗೆ ನೆಲೆಗೊಂಡ, ಹೇಗೆ ಹತ್ತು ಹಲವು ಜನಪದ ಕಥೆಗಳು ಹುಟ್ಟಿಕೊಂಡಿವೆ. ಇವು ಬಾಯಿಂದ ಬಾಯಿಗೆ ಬಂದಂತಹವು. ಇವುಗಳ ಸತ್ಯಾಸತ್ಯತೆಯ ಬಗೆಗೆ ಯಾವ ದಾಖಲೆಗಳೂ ಇರುವುದಿಲ್ಲ. ಆದರೆ ಸಂಗ್ರಹಗಳಿರುತ್ತವೆ.

ಉದಾಹರಣೆಗೆ:

* **ಕ್ಯಾತನಹಳ್ಳಿ ಉಗಮದ ಬಗೆಗೆ:** ಕ್ಯಾತನಹಳ್ಳಿ ಹೇಗೆ ಉಗಮಗೊಂಡಿತೆಂಬ ಕಥೆಯನ್ನೂ ಇಲ್ಲಿ ನೋಡಬಹುದು. ಹಿಂದೆ ಚೋಳರ ಕಾಲದಲ್ಲಿ ಚೋಳರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗುವ ವೇಳೆ, ನಮ್ಮೂರಿನ ಕೆರೆಯ ಬಳಿ ಬಂದು ಅಲ್ಲಿ

ಲಕ್ಷ್ಮೀಕಾತ ದೇವಾಲಯವನ್ನು ಒಂದೇ ರಾತ್ರಿಯಲ್ಲಿ ಕಟ್ಟಿ ನಂತರ ಅದರ ಕೆಳಗೆ ಊರನ್ನು ಕಟ್ಟಲಾಯಿತೆಂದು ಜನಪದ ಕಲೆ ಹುಟ್ಟಿಕೊಂಡಿದೆ. ಈ ಕಥೆ ಕೇಳಿದರೆ ನಿಜವೋ, ಸುಳ್ಳೋ ತಿಳಿಯದು, ಹಿಂದಿನ ವರ ಮಾತುಗಳಿಂದ ಬಂದಿದೆ. ದೇವಸ್ಥಾನ ಇರುವುದರಿಂದ ಹುಟ್ಟಿದೆಯೋ ಅಥವಾ ಊರು ಹುಟ್ಟಿದ ಮೇಲೆ ದೇವಸ್ಥಾನ-ವಾಗಿದೆಯೋ ತಿಳಿಯುವುದಿಲ್ಲ.

***ಮಾದೇಶ್ವರ ಹುಟ್ಟಿದ ಕಥೆ:** ನಮ್ಮೂರಿನ ಹಿರಿಯರ ಪ್ರಕಾರ, ಸತ್ಯವಂಶದ 'ಉತ್ತರಾಜಮ್ಮ' ಬಸುರಾಗಿರಲು, ಆ ಊರಿನ ರಾಜ ಅವಳನ್ನು ಅನುಮಾನಿಸಿ, ಅವಳು ಸತ್ಯವಂತಳೇ ಎಂದು ದೃಢೀಕರಿಸಲು ಒಂದು ಪರೀಕ್ಷೆ ನಡೆಸಿದನು. ಅದರ ಪ್ರಕಾರ ೧೬ ಕಂಡಿಕೆ ಗಂಧದ ಸೌದೆಯನ್ನು ತಂದು ಅದಕ್ಕೆ ಬೆಂಕಿ ಹಚ್ಚಿ, ಅವಳು ನಿಜವಾದ ಸತ್ಯವಂತಳಾದರೆ ಆ ಬೆಂಕಿಯ ಒಳಗೆ ಹೋಗಬೇಕು ಎಂದರು. ಹೊಟ್ಟೆಯೊಳಗಿನ ಆ ಕಂದನನ್ನು ಏನು ಮಾಡಲಿ ಎಂದು ಚಿಂತಿಸುವಾಗ, ಹೊಟ್ಟೆ ಒಳಗಿಂದ ಮಾದೇಶ್ವರ ಅರಳಿಮರಕ್ಕೆ ಹೋಗಿ ಕೂರುತ್ತಾನೆ. ನಂತರ ಆ ತಾಯಿ ತನ್ನನ್ನು ರಕ್ಷಿಸಬೇಕೆಂದು ಕೇಳಿದಳು. ಆಗ ಮಾದೇಶ್ವರ "ನೀನು ಹೆದರಬೇಡಮ್ಮ ನಿನ್ನನ್ನು ನನ್ನ ಮುತ್ತಿನ ಜೋಳಿಗೆಗೆ ಇರಿಸಿಕೊಳ್ಳುತ್ತೇನೆ. ನಂತರ ನೀನು ಹೋಗಿವೆಯೆಂದು" ಹೇಳುತ್ತದೆ. ನಂತರ ಸಂಜೆ ೬ ಗಮಟೆಗೆ ಆ ಮಾತೆ ಬೆಂಕಿಯಿಂದ ಎದ್ದುಹೊರಹೋದಾಗ ಅಲ್ಲಿದ್ದ ಶಿವಶರಣರು, ಬಸವಣ್ಣ, ಅಲ್ಲಮಪ್ರಭುಗಳ ಸಮೇತ ಆಶ್ಚರ್ಯಕ್ಕೊಳಗಾದರು. ಆ ಬೆಂಕಿಯ ಜ್ವಾಲೆ ಎಷ್ಟಿತ್ತೆಂದರೆ ಅನೇಕ ಮೈಲುಗಳವರೆಗಿನ ಕಾಡನ್ನು ಸಿಂಹ, ಹುಲಿ, ಪ್ರಾಣಿ, ಪಕ್ಷಿಗಳನ್ನು ಆಹುತಿ ತೆಗೆದುಕೊಂಡರೂ, ಈ ತಾಯಿಗೆ ಏನೂ ಆಗದೇ ಇರುವುದನ್ನು ಗಮನಿಸಿ ಎಲ್ಲರೂ ಆ ತಾಯಿಗೆ ನಮಸ್ಕರಿಸಿದರಂತೆ, ನಂತರ ಈ ಮಗುವೇ 'ಮಹದೇಶ್ವರ'ನಾಗಿ ನೆಲೆಗೊಂಡನೆಂದು ಕಥೆಯನ್ನು ಹೇಳುತ್ತಾರೆ. ಕ್ಯಾತನಹಳ್ಳಿ ಬಗೆಗೆ ಮತ್ತೊಂದು ಕಥೆ ಇದೆ. 'ಕ್ಯಾತ' ಎಂದರೆ ಒಂದು ಜನಾಂಗ ಅಥವಾ ಒಂದು ಗುಂಪು ಎಂದರ್ಥ. ಇಂತಹ ಗುಂಪಿನಲ್ಲಿ 'ಕ್ಯಾತ'ನೆಂಬ ಮುಖಂಡನಿದ್ದು ಹಿಂದೆ ಅಲೆಮಾರಿ ಜೀವನವು ಹೆಚ್ಚಾಗಿದ್ದುದ್ದರಿಂದ, ಕಾಡುಮೇಡು ತಿರುಗಾಡುತ್ತಾ, ಒಮ್ಮೆ ಲಕ್ಷ್ಮೀಕಾಂತ ದೇವಾಲಯವನ್ನು ನೋಡಿ, ಪಕ್ಕದಲ್ಲಿಯೇ ಕೆರೆ ಇದ್ದದ್ದರಿಂದ ಇಲ್ಲಿಯೇ ನೆಲೆಸುವುದು ಉತ್ತಮವೆಂದು ತಿಳಿದು, ಕಾಡಾಗಿದ್ದಂತಹ ಈ ಸ್ಥಳವನ್ನು ಊರಾಗಿ ಪರಿವರ್ತನೆಮಾಡಿ ನೆಲೆಸಿದ್ದರಿಂದಾಗಿ, ಈ ಊರಿಗೆ 'ಕ್ಯಾತನಹಳ್ಳಿ' ಎಂಬ ಹೆಸರು ಬಂದಿದೆ ಎಂಬ ಕಥೆಯೂ ಉಂಟು. ಜನಪದ ಕಥೆಗಳು ಯಾವಾಗಲೂ 'ಒಂದಾನೊಂದು ..........', 'ಒಂದು ಊರಿನಲ್ಲಿ............' 'ಒಬ್ಬ ರಾಜಕುಮಾರನ ಬಗೆಗೋ', ಹೀಗೆ ಕಥೆಗಳು ಆರಂಭವಾಗುವುದೇ ಹೆಚ್ಚು.

ರಾಜಕುಮಾರನ ಜೀವನವನ್ನು ಒಂದು ಪಕ್ಷಿಯಲ್ಲಿ ಇಟ್ಟಿರುವುದು. ಏಳುಸಮುದ್ರದಾಚೆಗಿನ ಸ್ವರ್ಗ ಹೀಗೆ ಕಥೆಗಳು ಕುತೂಹಲಕಾರಿಯಾಗಿರುತ್ತವೆ.

**೩) ಒಗಟು:** ನಮ್ಮ ನಾಡಿನಲ್ಲಿ ಒಗಟನ್ನು 'ಒಗಟೆ, ಒಡಪು, ಒಡಚು' ಎಂತಲೂ ಕರೆಯುತ್ತಾರೆ.

ಸುಲಭವಾಗಿ ತಿಳಿಯಲು ಅಥವಾ ಬಿಡಸು ಸಾಧ್ಯವಾಗದ ಮಾತು, ಗೂಢವಾದ ಮಾತು ಪ್ರಹೇಲಿಕೆ. ಇದಕ್ಕೆ ಸಮಸ್ಯೆ, ಸವಾಲು, ಗುಟ್ಟು ಇತ್ಯಾದಿ ವ್ಯಾಖ್ಯಾನಪರವಾದ ಅರ್ಥ ಉಂಟು. ಒಂದು ಸಂಸ್ಕೃತಿ ಭದ್ರಗೊಂಡಿರುವುದು. ಏಕವ್ಯಕ್ತಿಯಿಂದಲ್ಲ. ಮನುಷ್ಯ ಕೂಡಿ, ನಕ್ಕು ನಲಿದು ಬಾಳಿದಾಗಲೇ ಸಂಸ್ಕೃತಿ ಸ್ವರೂಪ ನೆಲೆಗೊಂಡಿದೆ. ಒಗಟೂ ಕೂಡ ಸಾಮಾನ್ಯವಾಗಿ ಮನುಷ್ಯ ಸಾಮೂಹಿಕವಾಗಿ ಬೆರೆತಾಗ ಒಗಟುಗಳು ಉಗಮವಾಗಿರುವುದು. ಕ್ರಮೇಣ ವಿಕಾಸಗೊಂಡು ಮುಂದೆ ಅದು ಅದರದೇ ಸ್ವರೂಪ ಪಡೆದುಕೊಂಡಿರಬಹುದು ಎಂಬುದನ್ನು ಒಗಟಿನ ಬಗೆಗೆ ಅಧ್ಯಯನ ಮಾಡಿದ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಭಾರತದಲ್ಲಿ ಒಗಟು ವೇದೋಪನಿಷತ್ ಕಾಲದಿಂದ ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ಅರಿಸ್ಟಾಟಲ್ ಕೂಡ ಒಗಟಿನ ಮೂಲಸ್ವರೂಪವನ್ನು ಕುರಿತು ಅಭಿಪ್ರಾಯಪಟ್ಟಿದ್ದಾರೆ. ಸರ್ ಜೆ.ಜೆ.ಪ್ರೇಜರ್ ಅವರು ತಮ್ಮ "golden book" ಎನ್ನುವ ಕೃತಿಯಲ್ಲಿ – 'ಒಗಟುಗಳ ಸ್ವರೂಪ ಗುಣಲಕ್ಷಣಗಳನ್ನು ವರ್ಣಿಸಿದ್ದಾರೆ.

ಒಗಟುಗಳು ಕಾವ್ಯಾತ್ಮಕವಾಗಿರುತ್ತವೆ ಹಾಗೂ ಗೀತಾತ್ಮಕವಾಗಿರುತ್ತದೆ. ಒಗಟು ಸಂಕೀರ್ಣವಾದುದು ಹಾಗೂ ಸರಳವಾಗಿರುತ್ತದೆ. ಸಂಕೀರ್ಣತೆ ಎಂದರೆ, ಜೀವನದ ಅರ್ಥಗಳನ್ನು ನಿಗೂಢವಾಗಿ ಇಟ್ಟುಕೊಂಡಿರುತ್ತವೆ. ನಿಗೂಢತೆ ಬೇಧಿಸಿದಾಗ ಅದರ ನೈಜ ಅರ್ಥ ದೊರಕುತ್ತದೆ. ಒಗಟುಗಳು ಭಾಷೆಯ ಚಮತ್ಕಾರದಿಂದ ಕೂಡಿರುತ್ತದೆ. ಒಗಟುಗಳು ಬುದ್ಧಿಶಕ್ತಿಗೆ ಸಂಬಂಧಿಸಿದ್ದಾಗಿದ್ದು, ಚಾಕಚಕ್ಯತೆ, ಚಮತ್ಕಾರವನ್ನು ಅದು ಭಾಷೆಯಲ್ಲಿ ಹಿಡಿದಿಡುವ ಕ್ರಮವೇ ಸೊಗಸಾಗಿರುತ್ತದೆ. ಇವು ಏಕಾರ್ಥದಲ್ಲಿ ಬಹು ವಿಧದ ಅರ್ಥವನ್ನು ತನ್ನ ಒಡಲಲ್ಲಿ ಇಟ್ಟುಕೊಂಡಿರುತ್ತವೆ.

ಉದಾ:

- ಕೈ ಇದ್ರೂ ತಿನ್ನಲ್ಲ, ಕಾಲಿದ್ರೂ ನಡೆಯಲ್ಲ

– ಖುರ್ಚಿ

- ಬಡವರು ತಗುದ್ ಒಗರ್ದೆ
  ಸಾಹುಕಾರ್ರು ಕಿಸೇದಾಗ್ ಇಟ್ಕತ್ತಾರೆ

  – ಸಿಂಬಳ

ಊರಿನಲ್ಲಿ ಹಿರಿತಲೆಯ ವ್ಯಕ್ತಿಗಳು ಹಾಸ್ಯ, ವಿಡಂಬನೆ ಹಾಗೂ ಮನರಂಜನೆಗೋಸ್ಕರ ಈ ರೀತಿಯ ಕಾವ್ಯಾತ್ಮಕವಾದ ಒಗಟುಗಳನ್ನೂ ಹೇಳುತ್ತಾರೆ.

- ಅಂಗಾಲ ಮೇಲ್ಮಾಡಿ ನೀರ ಕುಡಿವಣ್ಣ

  –ಆಡು

- ಮೂಗಿನದ ಬರ್ತಾನ ಮುಂದೆ ಸರಿಯಣ್ಣ

  –ಆನೆ

ಒಗಟುಗಳನ್ನು ಅವುಗಳ ಗುಣಸ್ವರೂಪದ ಆಧಾರದ ಮೇಲೆ ಪ್ರಧಾನವಾಗಿ ೨ ವಿಧಗಳಾಗಿ ವಿಂಗಡಿಸಬಹುದು – ೧) ಜನಪದ ಒಗಟುಗಳು

೨) ಸಾಹಿತ್ಯ ಒಗಟುಗಳು

ಜನಪದ ಒಗಟುಗಳು ಕಂಠಸ್ತವಾಗಿರುವಂತಹವು. ಮೌಖಿಕವಾಗಿ, ಒಬ್ಬರಿಂದ ಒಬ್ಬರಿಗೆ ಸಾಗಿಬಂದಿರುವಂತಹು. ಇವು ಹಳ್ಳಿಗಳಲ್ಲಿ ಯಥೇಚ್ಛವಾಗಿ ಸಿಗುತ್ತವೆ. ಸಾಹಿತ್ಯ ಒಗಟುಗಳು ಗ್ರಂಥಸ್ತವಾಗಿರುವಂತಹವು. ಅಂದರೆ ಕ್ಷೇತ್ರಕಾರ್ಯಮಾಡಿ ಸಂಗ್ರಹಿಸಿ ಅವುಗಳನ್ನು ಗ್ರಂಥಸ್ಥರೂಪದಲ್ಲಿ ಇಟ್ಟಿರುತ್ತಾರೆ.

ಈ ಗ್ರಾಮದಲ್ಲಿ ಅನಕ್ಷರಸ್ಥರು, ಹಿರಿಯರು ಹೇಳುವ ಒಗಟುಗಳನ್ನು ಅವುಗಳ ರೂಪಗಳಿಗೆ ಸಂಬಂಧಿಸಿದಂತೆ ಪ್ರಮುಖವಾಗಿ ಮೂರು ವಿಧಗಳಾಗಿ ವಿಂಗಡಿಸಬಹುದು.

- **ರೂಪ ಪ್ರಧಾನ ಒಗಟುಗಳು:**

– ಇವು ವರ್ಣನಾತ್ಮಕವಾಗಿದ್ದು, ಇವುಗಳ ರಚನೆಯು ತುಂಬಾ ಸರಳವಾಗಿ ಸಂಕೀರ್ಣತೆಯಿಂದ ಕೂಡಿರುತ್ತದೆ.

ಉದಾ: ಚೋಟುದ್ದ ಹುಡುಗಿಗೆ ಮಾರುದ್ದ ಜಡೆ – ಸೂಜಿದಾರ

- **ಅರ್ಥ ಪ್ರಧಾನ ಒಗಟುಗಳು:**

ಇಲ್ಲಿ ಒಗಟುಗಳ ಸ್ಥಿತಿಗತಿಗಳ ವ್ಯಾಪಕತೆ ಹೆಚ್ಚಾಗಿ ಕಂಡುಬರುತ್ತದೆ. ಅರ್ಥ ಚಿಂತನಾಶೀಲತೆಯಿಂದ ಕೂಡಿರುತ್ತದೆ. ಅರ್ಥವೇ ಪ್ರಧಾನವಾಗಿರುವಂತಹ- ದ್ದಾಗಿರುತ್ತದೆ.

**ಕ್ರಿಯಾ ಪ್ರಧಾನ ಒಗಟುಗಳು:**

ಒಂದು ಸ್ಥಿತಿಗತಿ ಸ್ಥಗಿತವಾಗಿರುವ ಕ್ರಿಯಾಶೀಲತೆಯನ್ನು ಈ ಬಗೆಯ ಒಗಟುಗಳು ಹೇಳುತ್ತಾ ಹೋಗುತ್ತವೆ. ಅಂದರೆ ಕೆಲಸವನ್ನು ಪ್ರಧಾನವಾಗಿಟ್ಟುಕೊಂಡಿರುವಂತಹದ್ದಾಗಿರುತ್ತದೆ.

ಉದಾ: ಅಕ್ಕ ತಂಗಿ ಮನೆಗೆ ಹೋಗಲ್ಲ, ಆದ್ರೆ ತಂಗಿ ಅಕ್ಕನ ಮನೆಗೆ ಹೋಗ್ತಾಳೆ.

- ಸೇರು ಪಾವು.

ನಿಜವಾದ ನಮ್ಮ ಊರಿನಂತಹ ಹಳ್ಳಿಗಳಲ್ಲಿ ಸಂಸ್ಕೃತಿಯ ಕೆನೆ ಮಮ್ಮ ಗ್ರಾಮಸಮಾಜದಲ್ಲಿ ಸಂಪ್ರದಾಯವಾಗಿರುತ್ತದೆ. ಪೂರಕವಾಗಿ ಎಲ್ಲಾ ವರ್ಗಗಳಲ್ಲಿಯೂ ಇರುತ್ತದೆ. ಒಗಟುಗಳು ಜಾನಪದ ಸಂಸ್ಕೃತಿಯಲ್ಲಿ ರೋಚಕವಾದ, ಕುತೂಹಲವಾದ, ಗ್ರಾಮ ಸಮಾಜದ ಜನ ಮಾನಸವನ್ನು ಪ್ರತಿನಿಧಿಸುವ ಒಂದು ಪ್ರತಿನಿಧಿಯಾಗಿ ಕಂಡುಬರುತ್ತದೆ. ಒಗಟು ವೇದಗಳ ಕಾಲದಲ್ಲಿ 'ಪ್ರಹೇಲಿಕಾ' ಎಂದು ಕರೆಯುವರು. ಒಗಟು ಎಂದರೆ ಕಷ್ಟವಾದುದು, ಗೂಢವಾದದು, ಸುಲಭವಾದುದಲ್ಲ ಎಂದರ್ಥ. ಜನಪದರ ಬುದ್ಧಿಶಕ್ತಿ ಪರೀಕ್ಷೆಯ ಒಂದು ಮಾಪನವಾಗಿ ಒಗಟು ಬಳಕೆಯಾಗುತ್ತದೆ. ಒಬ್ಬ ಒಂದು ಪ್ರಶ್ನೆ ಕೇಳುತ್ತಾನೆ. ಅದಕ್ಕೆ ಉತ್ತರ ಕೊಡುವವನು ಸೋತರೆ, ಆತನೂ ಒಂದು ಪ್ರಶ್ನೆಯನ್ನು ಒಡ್ಡಬೇಕು. ಒಗಟಿನಲ್ಲಿ ಜನಪದ ಮನರಂಜನೆ, ಲೋಕದ ತಿಳಿವಳಿಕೆ, ಬುದ್ಧಿಶಕ್ತಿ ಪರೀಕ್ಷೆ ಮತ್ತು ಆ ಮೂಲಕ ಹತ್ತಿರವಾಗುವ ಮನುಷ್ಯ ಸಂಬಂಧಗಳ ನೆಲೆಗಳು ಬಳಕೆಯಾಗುತ್ತವೆ. ನಮ್ಮೂರಿನಲ್ಲಿ ಒಗಟುಗಳನ್ನು ಹೆಚ್ಚಾಗಿ ಹಿರಿಯರು ಹೇಳುತ್ತಾರೆ. ಅವುಗಳಲ್ಲಿ ಕೆಲ ಮುಖ್ಯವಾದವುಗಳು ಈ ರೀತಿ ಇವೆ.

- ಅಂತಿಂಪ್ಪನ ತೋಟದಲ್ಲಿ ಇಂತಿಂಥ ಕಾಯಿ ಅದಕ್ಕೆ ತೊಟ್ಟೂ ಇಲ್ಲ ತುದಿಯೂ ಇಲ್ಲ' – (ಮುದ್ದೆ, ಹಿಟ್ಟು)
- 'ಅವ್ವನ ಹಾಸಿಗೆ ಮಡ್ಸೋಕ್ಕಾಗಲ್ಲ, ಅಪ್ಪನ ದುಡ್ಡು ಹೆಣ್ಸೋಕಾಗಲ್ಲ'– (ಆಕಾಶ ಮತ್ತು ನಕ್ಷತ್ರ).

- 'ಸುಗ್ಗುಲ್‌ದುಲ್ಲಿ ಹಬ್ಬಕ್ಕೋಗಿ ಒಂದೇಟೊಡದೇಟ್ಗೆ ಉಚ್ಚೆ ಉಯ್ಕಂಡ್ಲಂತೆ" – (ತೆಂಗಿನಕಾಯಿ)
- 'ಮರದೊಳಗೆ ಮರಹುಟ್ಟಿ, ಮರಕಾಯಾ ಹಣ್ಣಾಗಿ ತಿನ್ನಬಾರದ ಹಣ್ಣು ಬಲು ರುಚಿ' ಹಾಗಾದರೆ ನಾನ್ಯಾರು– (ತಾಯಿ–ಮಗು)
- 'ಸುತ್ತಮುತ್ತ ಸುಣ್ಣದ ಗೋಡೆ ಎತ್ತನೋಡಿದರೂ ದಾರಿಯಿಲ್ಲ'–(ಕೋಳಿಮೊಟ್ಟೆ)
- 'ಅಗಲಿಸದ್ದಕ್ಕೆ ನಿಗಿರಿಸಿ ಇಟ್ಟರೆ, ಕೆಂಪಗೆ ಅತ್ತಿ ಬಿಳ್‌ಗೆ ಉಳಿತು'–(ಸೌದೆ ಒಲೆ)
- 'ಸುಗ್ಗಲದಲ್ಲಿ ಹಬ್ಬಕ್ಕೆ ಹೋಗಿ ಒಂದು ಏಟು ಹೊಡೆದೇಟ್ಗೆ ಉಚ್ಚೆ ಉಯ್ಕೊಂಡ್ಲಂತೆ'– (ತೆಂಗಿನಕಾಯಿ)
- 'ಚಿಕ್ಕಮನೇಲಿ ಚಕ್ಕೆ ತುಂಬವೆ' – (ಬಾಯಿ ಮತ್ತು ಹಲ್ಲು)
- ಅಪ್ಪ ಹಲ್ಲುಬೀರ, ಅವ್ವ ತಲೆಗೆದರಿ ಮಗ ನಯಗಾರ (ಹಲಸಿನಹಣ್ಣು)
- ಕಲ್ಲಿಗಿಹುದು ಬೆಟ್ಟವಲ್ಲ, ಚಕ್ರವುಂಟು ಗಾಡಿಯಲ್ಲ, ಉಣ್ಣುವುದುಂಟು ಜೀವಿಯಲ್ಲ, ನಾನ್ಯಾರು? (ಬೀಸುವಕಲ್ಲು)
- ಕೈಯಿಲ್ಲ, ಕಾಲಿಲ್ಲ, ಹೆಸರಿಲ್ಲ, ಕುಲ ಇಲ್ಲ, ಆದ್ರೂ ಮನೆ ಬಿಟ್ಟು ಓಡ್ತಾನೆ, ಹಿಡಿಯಾಕ ಆಗಲ್ಲ (ಸಾಕು)
- ಮಿಣಿ ಮಿಣಿ ಪೋರರಿಗೆ ಮಣ್ಣಿನೊಳಗೇ ಕೆಲಸ (ಗೆದ್ದಲು ಹುಳುಗಳು)
- ಕಿತ್ತರೆ ಬಾಡೋಲ್ಲ ನೆಟ್ಟರೆ ಬೆಳೆಯೋಲ್ಲ (ಕೂದಲು)

ಳ) **ಗಾದೆಗಳು:** ಸಂಸ್ಕೃತದ 'ಗಾಥಾ' ಎಂಬ ಶಬ್ದಕ್ಕೂ ತಬ್ಧವವಾಗಿ ಕನ್ನಡದಲ್ಲಿ 'ಗಾದೆ' ಎಂಬ ಪದ ಬಳಕೆಯಾಗುತ್ತಿದೆ. ಗಾದೆಯಿಲ್ಲದ ಭಾಷೆ ಜಗತ್ತಿನಲ್ಲಿಲ್ಲ. ಗಾದೆ ಜೀವನಾನುಭವದ ಸಾರ್ವತ್ರಿಕ ಸತ್ಯವಾಗಿರುತ್ತದೆ. ಗಾದೆ ವೇದಕ್ಕೆ ಸಮ, ವೇದ ಸುಳ್ಳಾದರೂ ಗಾದೆ ಸುಳ್ಳಾಗದು. ಮನುಷ್ಯ ವಿವೇಕ ದಾರಿ ತಪ್ಪಿದಾಗಲೆಲ್ಲ ಗಾದೆಗಳು ಹುಟ್ಟಿವೆ. ಅವನ ವಿವೇಕವನ್ನು ತಿದ್ದಿವೆ. ಗಾದೆ ಯಾವಾಗಲೂ ಸಾಂದರ್ಭಿಕವಾದುದು. ಅದು ಸಂದರ್ಭದಲ್ಲಿ ಮನುಷ್ಯನ ನಡತೆಯನ್ನನುಸರಿಸಿಯೇ ಹುಟ್ಟುವುದರಿಂದ ಅದರ ಹುಟ್ಟು ಸಾಂದರ್ಭಿಕ. ಕ್ಯಾತನಹಳ್ಳಿಯಲ್ಲಿ ಪ್ರತಿಯೊಬ್ಬರೂ ಕೂಡ ಮಾತನಾಡುವಾಗ, ಜಗಳ ಮಾಡುವಾಗ, ಹೀಗೆ ನಿತ್ಯದ ಬದುಕಿನಲ್ಲಿ ಗಾದೆಗಳನ್ನು ಬಳಸುತ್ತಲೇ ಇರುತ್ತಾರೆ. ಈ ರೀತಿ ನೋಡಬಹುದಾಗಿದೆ. ಗಾದೆಗಳು ಸಾಮಾಜಿಕ, ಸಾಂಸ್ಕೃತಿಕ ಪ್ರಾದೇಶಿಕತೆಯನ್ನು ಪ್ರತಿಬಿಂಬಿಸುತ್ತವೆ.

- ಆಳಿನ ಮುದ್ದೆ ನಾಯಿ ಪಾಲು, ಮುದುಕ್ರೆ ಹೆಂಡ್ರು ಹುಡುಗರ ಪಾಲು'
- ಕತ್ತೆ ಮರೀಲಿ ಚೆಂದ ಅತ್ತೆ ಹೊಸುದ್ರಲ್ಲಿ ಚೆಂದ
- ಕಂಡವರ ಮಕ್ಕಳನ್ನು ಬಾವಿಗೆ ತಳ್ಳಿ, ಆಲ ನೋಡ್ದಂಗೆ
- ಆಸರಿಕೆ ಬ್ಯಾಸರಿಕೆ ಕಳಿಯನ ಅಂತ ತೌರಿಗೆ ಹೋದ್ರೆ, ತೌಡ ಕುಟ್ಟಕ್ಕಚ್ಚಿದ್ರು.
- ಮನಿಗೋದ್ರೆ ಮಜ್ಜಿಗೆ ಕೊಡದೋಳು, ಹೇಳಿಕಳಿಸಿದ್ರೆ ಹಾಲು ಕೊಟ್ಟಾಳ
- ಉಚ್ಚೆ ಕುಡುದ್ರೂ ತನ್ನ್ ಇಚ್ಚೆ ಇರ್ಬೇಕು.
- ಅಜ್ಜಿ ಇದ್ರೆ ಕೊರೆತ, ಕಜ್ಜಿ ಇದ್ರೆ ಕೆರೆತ
- ಇರುಳು ಕಂಡ ಬಾವಿಗೆ ಹಗಲು ಬೀಳಬಾರದು
- ಅಜ್ಜಿಗೆ ಅರಿವೇ ಚಿಂತೆ ಮಗಳಿಗೆ ಮಿಂಡನ ಚಿಂತೆ
- ಅತ್ತೆಗೊಂದು ಕಾಲ ಸೊಸೆಗೊಂದು ಕಾಲ
- ಮೂರು ಕೊಟ್ರೆ ಅತ್ತೆ ಕಡೆ, ಆರ್ ಕೊಟ್ರೆ ಸೊಸೆ ಕಡೆ
- ಅಳಿಯ ಮನೆತೊಳೆಯ
- ಗೆದ್ದಲು ಹುತ್ತ ಕಟ್ಟಿ ಹಾವಿಗೆ ಮನೆಯಾಯಿತು
- ಮಹಾ ಪತಿವ್ತೆ ಗಂಡನನ್ನು ಅಪ್ಪ ಅಂದಳು
- ಹಿಂದಿನದನ್ನ ನೆನೆದ್ಕೋ, ಹಿಮ್ಮಡಿ ತೊಳ್ಕೊ

೫) **ಜನಪದ ವೈದ್ಯ:** ನಮ್ಮಲ್ಲಿ ಈಗಿರುವ ಆಸ್ಪತ್ರೆ, ವೈಜ್ಞಾನಿಕ ಸಲಕರಣೆಗಳು, ವಿದ್ಯಾವಂತ ಪದವೀಧರ ವೈದ್ಯರು ನಮ್ಮ ಪೂರ್ವಿಕರ ಕಾಲದಲ್ಲಿ ಇರಲಿಲ್ಲ. ಆಗ ರೋಗ ನಿವಾರಣೆಗೆ ಹಳ್ಳಿ ಔಷಧಿ, ನಾಟಿ ಔಷಧಿ, ಕಾಡು ಮದ್ದು ಇತ್ಯಾದಿ ಹೆಸರುಳ್ಳ ಔಷಧಿಯನ್ನು ಬಳಸುತ್ತಿದ್ದರು. ಇದನ್ನು ಜನಪದ ವೈದ್ಯ ಎಂದು ಕರೆಯುತ್ತಾರೆ. ಈ ಔಷಧಿ ತಯಾರಿಕೆಗೆ ತಮ್ಮ ಸುತ್ತ ಮುತ್ತಲೂ ಸಿಗುವ ಅರಳಿ, ಬೇವು, ತೆಂಗು, ತುಳಸಿ, ನಿಂಬೆ, ವೀಳ್ಯದೆಲೆ, ಏಲಕ್ಕಿ, ಈರುಳ್ಳಿ, ಬೆಳ್ಳುಳ್ಳಿ, ಲವಂಗ, ಜೀರಿಗೆ, ಮೆಣಸು ಇತ್ಯಾದಿ ಪದಾರ್ಥಗಳನ್ನು ಬಳಸಿ ಖಾಯಿಲೆಗಳನ್ನು ವಾಸಿಮಾಡಿಕೊಳ್ಳುತ್ತಿದ್ದರು. ಹೀಗೆ ಗ್ರಾಮೀಣ ಜನರ ಬದುಕು ಪೂರ್ಣವಾಗಿ ನೈಸರ್ಗಿಕವಾಗಿದ್ದು ಅವರ ಪಾಲಿಗೆ ಪ್ರಕೃತಿಯೇ ಸಂಜೀವಿನಿಯಾಯಿತು. ಸಸ್ಯಮೂಲಿಕೆಗಳಿಂದ ತಯಾರಿಸಿದ ಔಷಧಿ-ಯಿಂದ ರೋಗ ನಿವಾರಣೆಯಾಗದಿದ್ದರೆ ದೇವರು, ಮಂತ್ರ, ಮಾಟ, ಧಾರ್ಮಿಕ

ಆಚರಣೆ ಸಂಪ್ರದಾಯ ಮತ್ತು ಇತರೆ ನಂಬಿಕೆಗಳಿಂದ ಗುಣಪಡಿಸುತ್ತಿದ್ದರು. ನಮ್ಮೂರಿನಲ್ಲಿ ಅನೇಕರು ಜನಪದರ ವೈದ್ಯರಿದ್ದರು. ಮನೆಯಲ್ಲೇ ಸಿಗುವ ವಸ್ತುಗಳನ್ನು ಬಳಸಿ ಉಪಚಾರ ಮಾಡುತ್ತಿದ್ದರು. ನಮ್ಮ ತಾತ ಅಂಗಡಿ ಸಣ್ಣಪ್ಪ, ಇವರು ತಲೆನೋವು, ಅರೆ ತಲೆನೋವಿಗೆ ಹಸಿರು ಔಷಧಿ ನೀಡುವಲ್ಲಿ ನಮ್ಮೂರಿಗೇ ಹೆಸರುವಾಸಿಯಾಗಿದ್ದರು. ಯಾವ ಜಾತಿ ಧರ್ಮ, ಎನ್ನುವ ಬೇಧವಿಲ್ಲದೇ ಮನೆಯ ಬಳಿ ಬರುವವರಿಗೆಲ್ಲಾ ಔಷಧಿ ನೀಡುತ್ತಿದ್ದರು, ಹಾಗೆ ಮತ್ತೊಬ್ಬರ ಜನಪದ ವೈದ್ಯ ಎಂದರೆ ಕುರುಬ ಜನಾಂಗದ ದಾಸಣ್ಣ, ಇವರು ಯಾವುದೇ ದೇಹದ ಜಾಗ ಉಳುಕ್ಕಿದ್ದರೂ, ಕೇವಲ ಒಂದು ಕುಡ್ಲುವಿನ ಸಹಾಯದಿಂದ ಮಂತ್ರಿಸಿ ಉಳುಕು ತೆಗೆಯುತ್ತಾರೆ. ಇವರೂ ಕೂಡ ಊರಿಗೆ ಹೆಸರುವಾಸಿಯಾದವರು. ಹೀಗೆ ನಮ್ಮೂರಿನಲ್ಲಿ ಅನೇಕ ಜನಪದ ವೈದ್ಯರುಗಳನ್ನು ಕಾಣಬಹುದಾಗಿದೆ. ಹೇಳಬೇಕೆಂದರೆ ಪ್ರತೀ ಮನೆಯಲ್ಲೂ ಇಂತಹ ಜನಪದ ವೈದ್ಯರುಗಳು ಕಂಡುಬರುತ್ತಾರೆ. ಪಾರ್ಶ್ವವಾಯು ಸಂಧಿಸಿದಾಗ ಪಾರಿವಾಳವನ್ನು ಬಲಿಕೊಟ್ಟು ಪೂಜಿಸಿ, ಅದರ ರಕ್ತದಿಂದ ಪಾರ್ಶ್ವವಾಯುವಿನ ಜಾಗಕ್ಕೆ ಸವರಿ ಉಪಚರಿಸುತ್ತಾರೆ. ಅರೆತಲೆನೋವಿಗೆ ಒಂದು ಜಾತಿಯ ಸೊಪ್ಪನ್ನು ಹಿಂಡಿ ಅದರ ರಸಕ್ಕೆ ಅಡುಗೆ ಎಣ್ಣೆ ಸೇರಿಸಿ ಕುಡಿಯುತ್ತಾರೆ. ಶೀತವಾದಾಗ, ಕೆಮ್ಮು, ಜ್ವರ ಬಂದಾಗ ಮೆಣಸಿನಕಾಳಿನ ಕಷಾಯ ಮಾಡಿ ಕುಡಿಯುತ್ತಾರೆ. ಜೊತೆಗೆ ಶುಂಠಿಯಿಂದ ಮಾಡಿದ ಚಹಾ ಸೇವಿಸುತ್ತಾರೆ. ಹಿಂದೆ ಋಷಿಮುನಿಗಳು ಎಲ್ಲಾ ಕಾಯಿಲೆಗಳಿಗೂ ಮದ್ದುಕೊಡುತ್ತಿದ್ದರು. ಅದು ಕಾಲಕ್ರಮೇಣ ಮುಂದುವರಿದು ಭಾರತದೇಶದಲ್ಲಿ ಹಳ್ಳಿಗಳು ಹೆಚ್ಚಾಗಿರುವುದರಿಂದ ಅದು ಮುಂದುವರೆದುಕೊಂಡುಬರುತ್ತಿದೆ. ಆಕಳುಗಳಿಗೆ ಕಾಯಿಲೆ ಕಾಣಿಸಿಕೊಂಡರೆ ಈ ಊರಿನ ಜನರೇ ಅವುಗಳಿಗೆ ಔಷಧಿಕೊಡುತ್ತಾರೆ. ಆಕಳುಗಳಿಗೆ 'ಬಾಹು', 'ಕಾಲುಜೊರ', 'ಬಾಯಿಜೊರ'ದಂತಹ ಹಲವಾರು ರೀತಿಯ ರೋಗಗಳು ಕಾಣಿಸಿಕೊಳ್ಳುತ್ತವೆ. ಇಂತಹ ರೋಗಗಳಿಗೆ ದೂರದ ಪಟ್ಟಣಗಳಿಂದ ವೈದ್ಯರನ್ನು ಕರೆಯಿಸದೇ, ತಾವೇ ಮನೆಮದ್ದು ನೀಡಿ ನಿವಾರಣೆಮಾಡುತ್ತಾರೆ. ಮುಖ್ಯವಾಗಿ ಜನರಿಗೆ ವಿಷಪೂರಿತ ಹಾವುಗಳು ಕಚ್ಚಿದಾಗಲೂ ಇಲ್ಲಿನ ಜಾನಪದ ವೈದ್ಯ ಕಾಳಸ್ವಾಮಪ್ಪ ಅವರು ಔಷಧಿ ನೀಡುತ್ತಾರೆ. ಔಷಧಿ ಪಡೆದ ರೋಗಿಯನ್ನು ಆ ರಾತ್ರಿ ನಿದ್ರೆಗೆ ಬಾರದಂತೆ ನೋಡಿಕೊಳ್ಳಬೇಕು. ಏಕೆಂದರೆ ನಿದ್ರೆಮಾಡಿದರೆ ವಿಷವು ದೇಹಕ್ಕತ್ತುವ ಅಪಾಯವಿರುತ್ತದೆ. ಚರ್ಮಕ್ಕೆ ಸಂಬಂಧಿಸಿದಂತೆ ಕಾಯಿಲೆಗಳು ಕಾಣಿಸಿಕೊಂಡಾಗ ನಾಟಿವೈದ್ಯರು ಅದಕ್ಕೆ ಮದ್ದು ನೀಡುತ್ತಾರೆ. ಅವರು ಕ್ಯಾತನಹಳ್ಳಿಯ ಸುತ್ತಮುತ್ತಲಿನ ಕಾಡುಮೇಡುಗಳಲ್ಲಿ ಸಿಗುವಂತಹ ಔಷಧೀಗುಣಗಳಿರುವ ಸಸ್ಯಗಳನ್ನು

ಸಂಗ್ರಹಿಸಿ ಮದ್ದು ನೀಡುತ್ತಾರೆ. ಪ್ರಾಣಕ್ಕೆ ಅಪಾಯವಾಗುವ ಸಂದರ್ಭದಲ್ಲಿ, ಅಥವಾ ದೇಹದ ಭಾಗಗಳಿಗೆ ತೀವ್ರ ರಕ್ತಸ್ರಾವವಾಗುವಂತಹ ಸನ್ನಿವೇಶಗಳಲ್ಲಿ ಮಾತ್ರ ರೋಗಿಗಳು ನಗರ ಪ್ರದೇಶಗಳ ಆಸ್ಪತ್ರೆಗಳಿಗೆ ಹೋಗುತ್ತಾರೆಯೇ ಹೊರತು ಮಿಕ್ಕೆಲ್ಲಾ ಸಣ್ಣಪುಟ್ಟ ಕಾಯಿಲೆಗಳ ನಿವಾರಣೆಗೆ ನಾಟಿ ವೈದ್ಯರುಗಳನ್ನು ನೆಚ್ಚಿಕೊಂಡಿದ್ದಾರೆ. ಆಸ್ಪತ್ರೆಗಳಲ್ಲೂ, ಇಂಗ್ಲಿಷ್ ಮೆಡಿಷನ್‌ಗಳಿಂದಲೂ ವಾಸಿಯಾಗದ ಕೆಲರೋಗಗಳಾದ, ಮಧುಮೇಹ, ಪಾರ್ಶ್ವವಾಯು, ಚರ್ಮಕಾಯಿಲೆಗಳು, ಉಸಿರಿನ ಸಂಬಂಧಪಟ್ಟ ಕಾಯಿಲೆಗಳ ರೋಗಿಗಳೂ ಸಹ ಕ್ಯಾತನಹಳ್ಳಿಗೆ ಬಂದು ನಾಟಿವೈದ್ಯರಿಂದ ಚಿಕಿತ್ಸೆ ಪಡೆಯುವುದೂ ಉಂಟು.

**೬) ಜನಪದ ಅಡುಗೆ:** ಇದು ಜಾನಪದದ ಒಂದು ಪ್ರಮುಖ ಅಂಗವಾಗಿದೆ. ಭಾರತ ದೇಶದಲ್ಲಿ ಹಳ್ಳಿಗಳ ಜನರು ದಷ್ಟಪುಷ್ಟವಾಗಿರಲು ಕಾರಣ ಅವರ ಅಡುಗೆ ಪದ್ಧತಿ, ಆಹಾರ ಪದ್ಧತಿ. ಇಡೀ ಪ್ರಪಂಚದಲ್ಲಿಯೇ ಒಂದು ವಿಶಿಷ್ಟವಾದ ಆಹಾರಪದ್ಧತಿಗಳನ್ನು ನಮ್ಮ ದೇಶ ಅಳವಡಿಸಿಕೊಂಡಿದೆ. ಇದರಿಂದಲೇ ಹಳ್ಳಿಗರು, ನಗರವಾಸಿಗಳಿಗಿಂತ ಆರೋಗ್ಯ ವಿಷಯದಲ್ಲಿ ಉತ್ತಮರಾಗಿದ್ದಾರೆ. ಅದಕ್ಕೆ ಕಾರಣ ಅವರ ಆಹಾರಪದ್ಧತಿ. ರಾಗಿರೊಟ್ಟಿ, ಜೋಳದ ರೊಟ್ಟಿ, ಕಾರ, ಚಟ್ನಿ, ಮುದ್ದೆ, ಜೋಳದ ಮುದ್ದೆ, ಉಪ್ಸಾರು, ಸೊಪ್ಪಿನಸಾರು, ಮೊಳೆಉಳ್ಳೀಕಾಳು ಸಾರು, ಬಾಡೂಟ, ಆರೋಗ್ಯಕರವಾದ ತರಕಾರಿ ಸೇವನೆ, ಬೇಳೆಕಾಳು, ದ್ವಿದಳಧಾನ್ಯಗಳು, ಏಕದಳ ಧಾನ್ಯಗಳು. ಹೀಗೆ ಹಳ್ಳಿಗಳು ಅವರದೇ ಆದ ಪದ್ಧತಿಗಳನ್ನು ರೂಢಿಸಿಕೊಂಡು ಆರೋಗ್ಯಕರವಾದ ಆಹಾರಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ. ರಾತ್ರಿ ಮಿಕ್ಕ ರಾಗಿಮುದ್ದೆಯನ್ನು ಮುಂಜಾನೆ ಎದ್ದು, ಅದನ್ನು ಮಜ್ಜಿಗೆಯೊಂದಿಗೆ ಕಲಸಿ, ಈರುಳ್ಳಿ ಬೆರಸಿ ತಿಂದರೆ ಆರೋಗ್ಯ ಉತ್ತಮವಾಗಿರುತ್ತದೆ. ಹೀಗೆ ಹಲವಾರು ರೀತಿಯ ಆಹಾರಪದಾರ್ಥಗಳನ್ನು ಅವರೇ ಸಿದ್ಧಮಾಡಿಕೊಂಡು ತಿನ್ನುತ್ತಾರೆ. ಆದ್ದರಿಂದಲೇ ಹಳ್ಳಿಗರು ಶಕ್ತಿವಂತರಾಗಿ, ಆರೋಗ್ಯವಂತರಾಗಿರಲು ಸಾಧ್ಯ. ಕ್ಯಾತನಹಳ್ಳಿಯು ನಗರಕ್ಕೆ ಹತ್ತಿರವಿರುವುದರಿಂದ ಇಂದು ಅವರ ಆಹಾರಪದ್ಧತಿಯಲ್ಲಿ ಅಲ್ಪಸ್ವಲ್ಪ ಬದಲಾವಣೆಯಾಗಿದ್ದರೂ, ಇಲ್ಲಿನ ಬಹುತೇಕ ಜನರು ಇನ್ನೂ ಜನಪದ ಅಡುಗೆಯನ್ನೆ ನೆಚ್ಚಿದ್ದಾರೆ.

**೭) ದೊಡ್ಡಾಟ:** ಬಯಲಾಟದಲ್ಲಿ ದೊಡ್ಡಾಟ ಮುಖ್ಯವಾಗಿದೆ. ದೊಡ್ಡಾಟದಲ್ಲಿ ಕಥಾವಸ್ತು ಪೌರಾಣಿಕ ಹಾಗೂ ಕಾಲ್ಪನಿಕ ಕಥೆಗಳನ್ನು ಒಳಗೊಂಡಿರುತ್ತದೆ. ಇದರಲ್ಲಿ ರೌದ್ರ, ವೀರ, ಭಕ್ತಿ, ಹಾಸ್ಯ, ಭಯಾನಕ ರಸಗಳು ಬರುತ್ತವೆ. ದೊಡ್ಡಾಟದ ಮಾತು ಸಂಸ್ಕೃತ ಮಿಶ್ರಿತ ಪ್ರಾಸಬದ್ಧ ಬಿಗುವಿನ ಶೈಲಿ, ಹಾಡುಗಳಲ್ಲಿ ಕಾವ್ಯಾಂಶವಿರುತ್ತದೆ. ಇದು ವಿಜಯನಗರದಿಂದಲೂ ಮುಖ್ಯ ಕಲೆಯಾಗಿ ಇಂದಿಗೂ ಉಳಿದಿದೆ. ಅದೇ

ರೀತಿ ಕ್ಯಾತನಹಳ್ಳಿಯಲ್ಲಿ ಈ ದೊಡ್ಡಾಟ ಬಹಳ ಹಿಂದಿನಿಂದಲೂ ನಡೆದುಬರುತ್ತಿದೆ. ಊರಿನ ಮಧ್ಯಭಾಗದಲ್ಲಿ ನಡೆಯುತ್ತದೆ. ಇಡೀ ರಾತ್ರಿ ಪೂರ ಈ ದೊಡ್ಡಾಟ ಜರುಗುತ್ತದೆ. ನನಗೆ ಬುದ್ಧಿ ಬಂದಾಗಿನಿಂದ ಇಲ್ಲಿ ಪ್ರತಿವರ್ಷವೂ ದೊಡ್ಡಾಟಗಳು ಜರುಗಿವೆ. ಇಲ್ಲಿ ಶನಿಮಹಾತ್ಮೆ, ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದ ನಾಟಕಗಳು, ದೇವರುಗಳಿಗೆ ಸಂಬಂಧಿಸಿದ ದೊಡ್ಡಾಟಗಳು ನಡೆದಿವೆ. ನಾನೂ ಸಹ 'ಚ್ಯವನ' ಎಂಬ ನಾಟಕದಲ್ಲಿ ರಾಜನ ಪಾತ್ರಧಾರಿಯಾಗಿ ಮಾಡಿರುವುದೊಂದು ನೆನಪಿನಲ್ಲಿರುವ ಸಂಗತಿ, ನಮ್ಮ ತಂದೆ ಶ್ರೀಕೃಷ್ಣ, ಅಭಿಮನ್ಯು ಪಾತ್ರಗಳನ್ನು ಮಾಡುವಲ್ಲಿ ಎತ್ತಿದ ಕೈ. ಅದೇ ರೀತಿ ನಮ್ಮ ತಾತ 'ಶಕುನಿ' ಪಾತ್ರವನ್ನು ಅಭಿನಯಿಸುವುದರಲ್ಲಿ ಹೆಸರುವಾಸಿಯಾಗಿದ್ದರು. ಗ್ರಾಮದಲ್ಲಿ ಎಲ್ಲಾ ಜನಾಂಗಗಳ, ವರ್ಗಗಳ ಜನರೂ ಒಟ್ಟಾಗಿ ಸೇರಿ ದೊಡ್ಡಾಟಗಳನ್ನು ಆಡುವುದು ಬಹುಮುಖ್ಯ ಸಂಗತಿ. ಇಲ್ಲಿ ಶಿವರಾತ್ರಿ, ದೀಪಾವಳಿ ವೇಳೆ ಜರುಗುತ್ತವೆ.

ಉದಾಹರಣೆಗೆ ಈ ಊರಿನಲ್ಲಿ 'ಶನಿಮಹಾತ್ಮೆ' 'ಕುರುಕ್ಷೇತ್ರ' ನಾಟಕಗಳು ತುಂಬಾ ಪ್ರಸಿದ್ಧಿ ಪಡೆದಿವೆ. ಇಲ್ಲಿ ನಾಟಕಗಳನ್ನು ಪ್ರದರ್ಶನ ಕೊಡುವುದಕ್ಕೂ ಮುಂಚೆ ಒಂದು ಸಲ ಅಭಿನಯಿಸಿ ನೋಡುತ್ತಾರೆ. ಅಂದರೆ ದೊಡ್ಡಾಟವನ್ನು ಪ್ರದರ್ಶಿಸುವುದಕ್ಕೂ ಮುಂಚೆ ಎಲ್ಲಾ ಪಾತ್ರಧಾರಿಗಳೂ ಯಾವುದೇ ತೊಡಕುಗಳಿಲ್ಲದೆ ಕಲಿತಿರುತ್ತಾರೆಯೇ ಎಂದು ಒಂದು ಪರೀಕ್ಷೆ ಎನ್ನಬಹುದು. ಅದಕ್ಕೆ ಹೆಚ್ಚಿನ ವಾದ್ಯಗಳೇನು ಇರುವುದಿಲ್ಲ. ಕೇವಲ ದೊಡ್ಡಾಟವನ್ನು ಕಲಿಸಿಕೊಡುವ ನಾಟಕದ ಮೇಷ್ಟ್ರು ತಮ್ಮ ಆರ್ಮೋನಿಯಂ ಅನ್ನು ಮಾತ್ರ ಉಪಯೋಗಿಸುತ್ತಾರೆ. ಅಂದು ಊರಿನ ಜನರು ಕಡಿಮೆ ಸಂಖ್ಯೆಯಲ್ಲಿ ಸೇರುತ್ತಾರೆ. ಅಂದು ಯಾವುದೇ ತೊಡಕುಗಳಿಲ್ಲದೇ ಅದು ಪ್ರದರ್ಶನಗೊಂಡರೆ ದೊಡ್ಡಾಟಕ್ಕೆ ಬೇಕಾದ ವಸ್ತ್ರಾಭರಣಗಳು, ವೇದಿಕೆಯ ಸಾಮಗ್ರಿಗಳು, ಆಯಾ ಸನ್ನಿವೇಶಗಳಿಗೆ ತಕ್ಕಂತ ವೇದಿಕೆಗೆ ಬೇಕಾದ ಉಪಕರಣಗಳನ್ನು ಇಪ್ಪತ್ತರಿಂದ ಮೂವತ್ತು ಸಾವಿರ ಹಣ ನೀಡಿ ತರಿಸುತ್ತಾರೆ. ಜೊತೆಗೆ ಸ್ತ್ರೀಪಾತ್ರಧಾರಿಗಳನ್ನೂ ಕರೆಯಿಸುತ್ತಾರೆ. ಇವು ಸಂಜೆ ಆರಂಭಗೊಳ್ಳುವುದು ಗ್ರಾಮದ ಹಾಗೂ ತಾಲ್ಲೂಕಿನ ಮುಖ್ಯ ಅಧಿಕಾರಿಗಳು, ರಾಜಕಾರಣಿಗಳನ್ನು ಕರೆಯಿಸಿ ಅವರಿಂದ ಉದ್ಘಾಟನೆ ಮಾಡಿಸುವುದರಿಂದ ಅವರು ಉದ್ಘಾಟಿಸಿದ ಮೇಲೆ ಅನಿಸಿಕೆ ಅಭಿಪ್ರಾಯಗಳನ್ನು ಹಂಚಿಕೊಳ್ಳುತ್ತಾರೆ. ನಂತರ ಸುಮಾರು ರಾತ್ರಿ ಒಂಭತ್ತು ಗಂಟೆಯ ಹೊತ್ತಿಗೆ ಆರಂಭವಾದರೆ ಯಾವುದೇ ಅಡಚಣೆಗಳು ಇಲ್ಲದೆ ಸಲೀಸಾಗಿ ಮುಂಜಾನೆಯವರೆಗೂ ಮುಂದುವರಿದು ಮುಕ್ತಾಯವಾಗುತ್ತವೆ. ಕ್ಯಾತನಹಳ್ಳಿಯ ದೊಡ್ಡಾಟಗಳೆಂದರೆ ಸುತ್ತಮುತ್ತಲಿನ ಹಳ್ಳಿಗಳಷ್ಟೇ ಅಲ್ಲದೆ ಇಡೀ ತಾಲ್ಲೂಕಿಗೆ

ಪರಿಚಯವಾಗಿದೆ. ದೊಡ್ಡಾಟದಲ್ಲಿ ಕ್ಯಾತನಹಳ್ಳಿ ತನ್ನದೇ ಹೆಸರನ್ನು ಮೂಡಿಸಿದೆ. ಇಲ್ಲಿ ಇಂತಹ ಆಟಗಳನ್ನು ಆಡುವವರಲ್ಲಿ ಅನೇಕ ಜನರು ನಿಸ್ಸೀಮರು. ಉದಾ: ಹುಚ್ಚೇಗೌಡ ಎಂಬುವವರು ದುರ್ಯೋಧನನ ಪಾತ್ರ ಮಾಡುವುದರಲ್ಲಿ ಎತ್ತಿದ ಕೈ.

೮) **ಸಣ್ಣಾಟ:** ಇದು ದೊಡ್ಡಾಟಕ್ಕೆ ವಿರುದ್ಧವಾದ ಅಂಶಗಳನ್ನು ಹೊಂದಿರುವಂತದ್ದು. ಅಂದರೆ ದೊಡ್ಡಾಟ ದೀರ್ಘವಾಗಿದ್ದರೆ, ಇದು ಅವಧಿ ತುಂಬಾ ಕಡಿಮೆಯದ್ದಾಗಿರುತ್ತದೆ. ಬೇಗ ಮುಗಿಯುವಂತದ್ದಾಗಿರುತ್ತದೆ. ಇದು ಪೌರಾಣಿಕ ಕಥಾವಸ್ತು ಹೊಂದಿದ್ದರೂ ಕಡಿಮೆ ಕಥಾವಸ್ತುವಿರುತ್ತದೆ. ಇದು ಜನಸಾಮಾನ್ಯರ ಆಟ ಹಾಡುವುದನ್ನು ಅಳತೆಗೋಲನ್ನಾಗಿ ಇಟ್ಟುಕೊಂಡು ಸಣ್ಣಾಟಗಳನ್ನು ಪರಾಮರ್ಶಿಸಿದರೆ ತಿಳಿಯುತ್ತದೆ. ಇಲ್ಲಿ ಹೆಚ್ಚಾಗಿ ಈ ಸಣ್ಣಾಟ ಆಡದಿದ್ದರೂ ನಾಟಕದ ಹಿಂದೆ ಕಲಿಕೆಗಾಗಿ 'ಗೆಜ್ಜೆಪೂಜೆ' ಎಂದು ಮಾಡುತ್ತಾರೆ. ಅದು ಪ್ರಕಾರಕ್ಕೂ ಉದಾಹರಣೆಯಾಗಿದೆ.

ಸಣ್ಣಾಟಗಳಲ್ಲಿ ಎರಡು ವಿಧಗಳನ್ನು ಇಲ್ಲಿ ನೋಡಬಹುದು.

* ಪೌರಾಣಿಕ / ಐತಿಹಾಸಿಕ ಸಣ್ಣಾಟಗಳು

* ಸಾಮಾಜಿಕ ಸಣ್ಣಾಟಗಳು

ಪೌರಾಣಿಕ ಸಣ್ಣಾಟಗಳೆಂದರೆ ದೊಡ್ಡದಾಗಿರದೆ, ಚಿಕ್ಕದಾಗಿರುತ್ತವೆ. ಇವು ಕೆಲವೇ ಗಂಟೆಗಳಷ್ಟು ಅವಧಿಯನ್ನು ಒಳಗೊಂಡಿರುತ್ತದೆ. ಕೇವಲ ಸೀತೆಯ ಅಪಹರಣದ ಸನ್ನಿವೇಶ ಅಥವಾ ಭರತ-ಬಾಹುಬಲಿಯರ ಯುದ್ಧ ಸನ್ನಿವೇಶ, ಸೀತಾಸ್ವಯಂವರ. ಹೀಗೆ ಕೇವಲ ಕಡಿಮೆ ಅವಧಿಯ, ಕಡಿಮೆ ವಿಷಯ ಕಥಾವಸ್ತುವಿನ ಆಟಗಳಾಗಿರುತ್ತವೆ. ಇವು ಕೆಲವೇ ಪಾತ್ರಗಳನ್ನು ಹೊಂದಿರುತ್ತವೆ. ಹಾಗೆಯೇ ಕಡಿಮೆ ಖರ್ಚುವೆಚ್ಚಗಳನ್ನು ಹೊಂದುತ್ತವೆ. ಬೇಸರವನ್ನೂ ತರುವುದಿಲ್ಲ. ಸಾಮಾಜಿಕ ನಾಟಕಗಳು, ಇವು ಇಂದಿನ ಸಮಾಜದಲ್ಲಿ ಇರುವ ವಿಷಯಗಳನ್ನು ಕಥಾವಸ್ತುವಾಗಿ ಹೊಂದಿರುವಂತಹವು. ಇವುಗಳಿಗೆ ಯಾವುದೇ ಐತಿಹಾಸಿಕ ನಾಟಕದಂತೆ ದುಬಾರಿ ಉಡುಗೆತೊಡಗೆಗಳನ್ನು ಕೇಳುವುದಿಲ್ಲ. ಒಟ್ಟಾರೆ ಈ ಸಣ್ಣಾಟಗಳು ಕಡಿಮೆ ಅವಧಿಯಿಂದ ಕೂಡಿರುತ್ತವೆ. ಕ್ಯಾತನಹಳ್ಳಿಯಲ್ಲಿ ಇಂತಹಾ ಆಟಗಳು ಪದೇ ಪದೇ ನಡೆಯುತ್ತಲೇ ಇರುತ್ತವೆ. ವ್ಯವಸಾಯದ ಕೆಲಸಗಳು ಆರಂಭವಾಗುವುದಕ್ಕೂ ಮೊದಲು ಇಲ್ಲಿನ ಜನರು ಇಂತಹ ಆಟಗಳನ್ನು ಆಡುತ್ತಾರೆ. ಮುಂದೆ ಹೇಗಿದ್ದರೂ ವ್ಯವಸಾಯ, ಕೂಲಿ ಮುಂತಾದ ಕೆಲಸಗಳಲ್ಲಿ ತೊಡಗುವುದು ಇದ್ದೇ ಇರುತ್ತದೆ ಎಂದು ಸಂತೋಷದಿಂದಲೂ ಪಾಲ್ಗೊಳ್ಳುತ್ತಾರೆ ಹಾಗೂ

ಬೇಸಾಯದ ಮೊದಲ ಹಂತ ಮುರಿದ ಮೇಲೆ ಹಾಗೂ ಬೆಳೆಯ ಕಟಾವುಗಲು ಮುಗಿದಮೇಲೆ ಸಂತೋಷಕ್ಕೆಂದು ಆಡುತ್ತಾರೆ. ಹಾಗೆಯೇ ಹಬ್ಬ-ಹರಿದಿನಗಳಲ್ಲಿ, ಜಾತ್ರೆಗಳ ಸಂದರ್ಭಗಳಲ್ಲಿ ಇಂತಹ ಆಟಗಳನ್ನು ಈ ಊರಿನ ಜನರು ಆಡುತ್ತಾರೆ.

೯) **ಬಯಲಾಟ:** ದೊಡ್ಡಾಟ ಮತ್ತು ಸಣ್ಣಾಟಗಳೆರಡೂ ಇದರೊಳಗೆ ಬರುವಂತಹವು. ಹೆಸರೇ ಸೂಚಿಸುವಂತೆ ಇದನ್ನು ಬಯಲುಗಳಲ್ಲಿ ಆಡುವಂಥದ್ದು. ಇದು ಮತಧರ್ಮಗಳಿಂದ ಪ್ರೇರಣೆಗೊಂಡ ಸಮುದಾಯಿಕ ಕಲೆ, ಧಾರ್ಮಿಕ ಶುಭಾಕಾಂಕ್ಷೆ ಮತ್ತು ಮನರಂಜನೆ ಇವೆರಡೂ ಬಯಲಾಟದ ಗುರಿಯಾಗಿತ್ತು. ಕ್ಯಾತನಹಳ್ಳಿ ಗ್ರಾಮದಲ್ಲಿ ಈ ಮೇಲಿನ ಎಲ್ಲಾ ಜನಪದ ಕಲೆಗಳನ್ನು ಯತೇಚ್ಛವಾಗಿ ಕಾಣಬಹುದಾಗಿದೆ. ಬಯಲಾಟಗಳು ಈ ಊರಿನ ಹೆಸರಿಗೆ ಊರಿನ ವಿಚಾರಕ್ಕೆ ಸಂಬಂಧಪಟ್ಟಂತೆ ಒಂದು ಕಳಶವಿದ್ದಂತಿವೆ. ಊರಿಗೆ ಹಿರಿಕರು ಯಾವುದಾದರೂ ಸಮಾರಂಭಕ್ಕೆ ಬರಲೀ ಅಥವಾ ರಾಜಕಾರಣಿಗಳು ಯಾವುದಾದರೂ ಕಾರ್ಯಕ್ರಮಗಳಿಗೆ ಬಂದಾಗ, ಅಧಿಕಾರಿಗಳು ಬಂದಾಗ ವೇದಿಕೆಯ ಮೇಲೆ ಮಾತನಾಡುವಾಗ ಬಯಲಾಟಗಳನ್ನು ಆಡುವುದರ ಬಗೆಗೆ ವಿಚಾರಿಸುತ್ತಿರುತ್ತಾರೆ. ಧನಸಹಾಯಕ್ಕೂ ಮುಂದಾಗುತ್ತಾರೆ. ಇಂತಹ ಆಟಗಳು ಆ ಹಳ್ಳಿಯ ಗೌರವಗಳನ್ನು ಹಿಮ್ಮಡಿಗೊಳಿಸುವುದರ ಜೊತೆಗೆ, ಹಳ್ಳಿಯ ಸೊಗಡು, ಹಳ್ಳಿಯ ದೇಸೀಯ ವಾಸನೆ, ಮಣ್ಣಿನ ವಾಸನೆಯನ್ನು ಇತರೆಡೆಗೆ ತಲುಪಿಸುತ್ತವೆ. ಇವುಗಳ ಮೂಲಕ ಇಂದು ನಮ್ಮ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಹೋಗಲು ಸಹಕಾರಿಯಾಗಿವೆ ಎನ್ನಬಹುದು.

೧೦) **ಜನಪದ ಆಟಗಳು:** ಜನಪದ ಆಟಗಳು ಜನಪದ ಕಲೆಗಳ ಒಂದು ಭಾಗವಾಗಿದೆ. ಮೈಸೂರು ಜಿಲ್ಲೆಯ, ಹೆಗ್ಗಡದೇವನಕೋಟೆ ತಾಲ್ಲೋಕಿನ ಇತರ ಪ್ರದೇಶಗಳಿಗೆ ಹೋಲಿಸಿದರೆ ಕ್ಯಾತನಹಳ್ಳಿಯು ಜನಪದ ಆಟಗಳು, ಕಲೆಗಳಿಗೆ ಪ್ರೋತ್ಸಾಹ ನೀಡುತ್ತಾ ಬಂದಿದೆ. ಆಟಗಳ ಪ್ರಧಾನ ಉದ್ದೇಶ ಮನರಂಜನೆಯೇ ಆಗಿ ಬೆಳೆದುಕೊಂಡು ಬಂದಿದೆ. ಹಿಂದಿನಿಂದಲೂ ಒಂದು ಹಳ್ಳಿಯಲ್ಲಿ ಬೆಳೆದುಕೊಂಡು, ರೂಢಿಯಲ್ಲಿರುವ ಆಟಗಳನ್ನು ಜನಪದ ಆಟಗಳೆಂದು ಕರೆಯಲಾಗುತ್ತದೆ. ರಾಜ ಮಹಾರಾಜರ ಕಾಲದಿಂದಲೂ ಆಟಗಳು ಇದ್ದವೆಂಬುವುದಕ್ಕೆ ಆಧಾರಗಳಿವೆ.

**ಉದಾ:** ಪಗಡೆ ಆಟ, ಚದುರಂಗ, ಕುಸ್ತಿ ಮುಂತಾದವು.

ತಮ್ಮ ಬಾಲ್ಯ, ಯೌವನ ಹಾಗೂ ಮುಪ್ಪಿನಲ್ಲಿಯೂ ಕೂಡ ತಮ್ಮ ವಯಸ್ಸಿಗೆ ತಕ್ಕಂತೆ ಆಟಗಳನ್ನು ಸ್ತ್ರೀಪುರುಷರಿಬ್ಬರೂ ಆಡಿಕೊಂಡು ಬಂದಿದ್ದಾರೆ. ಕ್ಯಾತನಹಳ್ಳಿಯ ಜನಪದರಲ್ಲಿ ಹಲವಾರು ಜನಪದ ಆಟಗಳು ಈ ರೀತಿ ಇವೆ.

೧. ಅಳಿಗುಳಿ ಮನೆ

೨. ಚೌಕಬಾರ

೩. ಬುಗುರಿ ಆಟ

೪. ಗೋಲಿ ಆಟ

೫. ಕುಂಟೇ ಬಿಲ್ಲೆ

೬. ಕಣ್ಣಾಮುಚ್ಚಾಲೆ

೭. ಮರಕೋತಿ ಆಟ

೮. ಗಿಲ್ಲಿದಾಂಡು ಆಟ

೯. ಹಸುಹುಲಿ ಆಟ

೧. **ಅಳಿಗುಳಿಮನೆ:–** ಇದು ಒಳಾಂಗಣ ಆಟವಾಗಿದೆ. ಮುಖ್ಯವಾಗಿ ಇದು ಹೆಣ್ಣುಮಕ್ಕಳ ಆಟವಾಗಿದೆ. ಜೊತೆಗೆ ವಯಸ್ಸಾದ ಸ್ತ್ರೀಯರೂ ಕೂಡ ಈ ಆಟವನ್ನು ಆಡುತ್ತಾರೆ. ಮರದಿಂದ ಅಥವಾ ಲೋಹದಿಂದ ಈ ಅಳಿಗುಳಿಮನೆ ತಯಾರಾಗಿರುತ್ತದೆ. ಇದರಲ್ಲಿ ಹುಣಸೆಬೀಜಗಳನ್ನು ಮನೆಯೊಂದಕ್ಕೆ ಐದು ಬೀಜಗಳಂತೆ ಹಾಕಿಕೊಂಡು ಆಟವಾಡುತ್ತಾರೆ. ಜೊತೆಗೆ 'ಸೀತೆ ಆಟ' ಎಂಬ ಒಂದು ವಿಧದ ಆಟವೂ ಇದೆ. ಸೀತೆ ಕಾಡಿನಲ್ಲಿದ್ದಾಗ ಒಬ್ಬಳೇ ಬೇಜಾರು ಕಳೆಯಲು ಆಡುತ್ತಿದ್ದಳಂತೆ. ಒಂದು ಕಡೆ ಏಳು ಮನೆಯಲ್ಲಿ ಒಂದರಿಂದ ಏಳು ಕಾಳುಗಳನ್ನು ಹಾಕಿ ಆಡುವುದು. ಇಬ್ಬರು ಆಟವಾಡುವಾಗ ಎರಡೂ ಕಡೆ ಒಬ್ಬಬ್ಬೊರು ಆಡುತ್ತಾರೆ.

೨. **ಚೌಕಬಾರ:–** ಈ ಆಟವನ್ನು ಸ್ತ್ರೀಯರು, ಪುರುಷರು, ಮಕ್ಕಳು ಹಾಗೂ ಪ್ರತಿಯೊಂದು ವಯೋಮಾನದವರು ಆಡುವ ಒಳಾಂಗಣ ಆಟವಾಗಿದೆ. ನೆಲದಮೇಲೆ ಅಥವಾ ಒಂದು ಅಗಲವಾದ ವಸ್ತುವಿನ ಮೇಲೆ ಮನೆಗಳನ್ನು ಬರೆದುಕೊಂಡು ನಾಲ್ಕು ಜನ ಆಡುವ ಆಟ. ಇದು ೫ X ೫ =೨೫ ಮನೆಗಳನ್ನು ಹೊಂದಿರುತ್ತದೆ. ಹುಣಸೇ ಬೀಜಗಳನ್ನು ಬೇಳೆ ಮಾಡಿಕೊಂಡು ಅಥವಾ ಕವಡೆಗಳ ಸಹಾಯದಿಂದ ಆಟವಾಡುತ್ತಾರೆ. ಐದುಮನೆ ಆಟಕ್ಕೆ ನಾಲ್ಕು ಪಿಚ್ಚೆ, ಏಳು ಮನೆ ಆಟಕ್ಕೆ ಆರು ಪಿಚ್ಚೆಗಳನ್ನು ಬಳಸುತ್ತಾರೆ. ಕಪ್ಪು ಬಿದ್ದರೆ ಎಂಟು ಎಂತಲೂ ಬಿಳಿಭಾಗವಿದ್ದರೆ ನಾಲ್ಕು ಎಂತಲೂ ಸಂಖ್ಯೆಯನ್ನು ಗುರುತಿಸಿ ಆಡುತ್ತಾರೆ. ಹಾಗೆ ಕಾಯಿಗಳನ್ನು ನಡೆಸಿಕೊಂಡುಹೋಗುತ್ತಾರೆ. ಎದುರಾಳಿಯ

ಕಾಯಿಯನ್ನು ಹೊಡೆದಾಗ ಮತ್ತೆ ಅವನು ಮೂಲಸ್ಥಳಕ್ಕೆ ಬರಬೇಕು. ಅವನನ್ನು ತಪ್ಪಿಸಿಕೊಂಡು ಕಾಯನ್ನು ಹಣ್ಣು ಮಾಡಿದಾಗ ಆತ ಗೆದ್ದಂತೆ. ಹೀಗೆ ಮನೋರಂಜನೆಯೊಂದಿಗೆ ಚತುರತೆ, ಅದೃಷ್ಟ ಪರೀಕ್ಷೆಯು ಈ ಆಟದಲ್ಲಿದೆ.

೩. **ಬುಗುರಿ ಆಟ:** ಈ ಆಟವನ್ನು ಗಂಡುಮಕ್ಕಳು ಆಡುತ್ತಾರೆ. ನಮ್ಮೂರಿನಲ್ಲಿ ಜನಸಂಖ್ಯೆ ಜಾಸ್ತಿ ಇರುವುದರಿಂದ ಸಹಜವಾಗಿ ಮಕ್ಕಳೂ ಹೆಚ್ಚು. ಅಂದಮೇಲೆ ಮಕ್ಕಳು ಎಂದರೆ ಆಟ. ಆಟ ಎಂದರೆ ಮಕ್ಕಳು ಸಹಜವಾಗಿಯೇ ಬುಗುರಿ ಆಟ ಹೆಚ್ಚಾಗಿ ಆಡುತ್ತಾರೆ. ಹೋರಾಂಗಣ ಆಟವಾಗಿದ್ದು, ಒಳಾಂಗಣದಲ್ಲೂ ಆಡಬಹುದು. ಇದನ್ನು ಮರದಿಂದ ಮಾಡುತ್ತಾರೆ. ಜಾತ್ರೆಗಳಲ್ಲಿ ಸಿಕ್ಕರೂ ಅವು ಊರಿನಲ್ಲಿ ಮಾಡಿದಷ್ಟು ಗಟ್ಟಿ ಇರುವುದಿಲ್ಲ. ಗೊಬ್ಬಳಿ ಮರದಿಂದ ಮಾಡಿದ ಬುಗುರಿಯನ್ನು ಹೆಚ್ಚಾಗಿ ಬಳಸುತ್ತಾರೆ. 'ಗುನ್ನ' ಹೊಡೆಯುವ ಆಟವು ಇಲ್ಲಿ ಹೆಚ್ಚು ಪ್ರಸಿದ್ಧ. ಸೋತವನ ಬುಗುರಿಗೆ ಗೆದ್ದವರು, ಬುಗುರಿಯ ಮೊಳೆಯಿಂದ 'ಗುನ್ನ' ಹೊಡೆಯುತ್ತಾರೆ. ಆ ಮೊಳೆ ಸೋತ ಬುಗುರಿಗೆ ಚುಚ್ಚಿಕೊಂಡರೆ ಕಲ್ಲಿನಿಂದ ಹೊಡೆದು ಬಿಡಿಸುವ ಆಟ ಹೆಚ್ಚಾಗಿದೆ.

೪. **ಗೋಲಿ ಆಟ:** ಇದು ಬಯಲಿನಲ್ಲಿ ಆಡುವ ಆಟ. ಇದನ್ನು ಹೆಚ್ಚಾಗಿ ಗಂಡುಮಕ್ಕಳೇ ಆಡುತ್ತಾರೆ. ಇಬ್ಬರು ಅಥವಾ ಇಬ್ಬರಿಗಿಂತಲೂ ಹೆಚ್ಚು ಜನರು ಆಡುವಂತಹ ಆಟ. ಇದರಲ್ಲಿ ಅನೇಕ ವಿಧಾನದ ಆಟಗಳೂ ಉಂಟು. ಒಬ್ಬರ ಗೋಲಿಯಿಂದ ಇನ್ನೊಬ್ಬರ ಗೋಲಿಗೆ ತಾಗಿಸಿದರೆ ಗೋಲಿಯನ್ನು ಗೆದ್ದಂತೆ. ಮತ್ತೊಂದು ಚೌಕಾಕಾರದ ಮನೆ ಬರೆದುಕೊಂಡು ಆಡುವ ಆಟವೂ ಉಂಟು. ಅದನ್ನು 'ಪೇಂದ' ಎಂದು ಕರೆಯುತ್ತಾರೆ.

೫. **ಕುಂಟೇ ಬಿಲ್ಲೆ:** ಈ ಆಟವನ್ನು ಹೆಚ್ಚಾಗಿ ಹೆಣ್ಣುಮಕ್ಕಳೇ ಆಡುತ್ತಾರೆ. ಇದನ್ನು ಒಳಾಂಗಣ ಆಟ ಮತ್ತು ಹೋರಾಂಗಣ ಆಟವಾಗಿಯೂ ಹೆಣ್ಣುಮಕ್ಕಳು ಆಡುತ್ತಾರೆ. ನೆಲದ ಮೇಲೆ ಎರಡೂ ಕಡೆ ನಾಲ್ಕು ನಾಲ್ಕು ಮನೆಗಳನ್ನು ರಚಿಸಿ, ಒಂದು ಹೆಂಚಿನ ಬಿಲ್ಲೆಯನ್ನು ಬಳಸಿಕೊಂಡು ಬಿಲ್ಲೆಯನ್ನು ಮನೆಯೊಳಗೆ ಎಸೆದು ಕಣ್ಣುಮುಚ್ಚಿ ನೆಗೆಯುತ್ತಾ ಹೋಗುವುದು ಈ ಆಟದ ವಿಶೇಷ. ಈ ಆಟವನ್ನು ಆಡುವಾಗ ಊರಿನ ಜನರೆಲ್ಲರೂ ನೋಡಿ ಮನೋರಂಜನೆ ಪಡೆಯುತ್ತಾರೆ.

೬. **ಕಣ್ಣಾಮುಚ್ಚಾಲೆ:** ಈ ಆಟ ಹೊರಾಂಗಣ ಆಟವಾಗಿದೆ. ಹುಡುಗರು, ಹುಡುಗಿಯರು ಹಾಗೂ ಇಬ್ಬರೂ ಒಟ್ಟಾಗಿಯೂ ಆಡಬಹುದಾದಂತಹ

ಆಟವಾಗಿದೆ. ಮಕ್ಕಳೆಲ್ಲಾ ಸೇರಿ ಕೈ ಕೈ ಜೋಡಿಸಿ ಚಪ್ಪಾಳೆ ಹಾಕಿ ಸೋತ ಒಬ್ಬರನ್ನು ಮತ್ತೊಬ್ಬರು ಕಣ್ಣುಮುಚ್ಚಿಕೊಂಡು ಹೀಗೆ ಹೇಳುತ್ತಾರೆ.

"ಕಣ್ಣಾ ಮುಚ್ಚೇ ಕಾಡೇ ಗೂಡೇ
ಉದ್ದಿನ ಮೂಟೆ ಉರುಳೇ ಹೋಯ್ತು
ನಮ್ಮಯ ಹಕ್ಕಿ ಬಿಟ್ಟೆ ಬಿಟ್ಟೆ
ನಿಮ್ಮ ಹಕ್ಕಿ ಹಿಡಿದುಕೊಳ್ಳಿ"

– ಹೀಗೆ ಹೇಳಿ ಮುಗಿಸುವ ಹೊತ್ತಿಗೆ ಮಿಕ್ಕವರೆಲ್ಲಾ ಅವಿತುಕೊಳ್ಳುತ್ತಾರೆ. ಕಣ್ಣು ಮುಚ್ಚಿಸಿಕೊಂಡವನು ಯಾರನ್ನು ಮೊದಲು ನೋಡುತ್ತಾನೋ ಅಥವಾ ಮುಟ್ಟುತ್ತಾನೋ ಆತ ಸೋತಂತೆ. ಗೆಲ್ಲಬೇಕೆಂದರೆ ಕಣ್ಣುಮುಚ್ಚಿಸಿಕೊಂಡವನಿಗೆ ಕಾಣದಂತೆ ಅವನು ಮುಚ್ಚಿಸಿಕೊಂಡ ಜಾಗವನ್ನು ಅವನಿಗೆ ಗೊತ್ತಿಲ್ಲದಾಗೆ ಮುಟ್ಟುವುದು. ಹೀಗೆ ನಿರಂತರವಾಗಿ ಗಂಟೆಗಟ್ಟಲೆ ಆಟ ನಿರಂತರವಾಗಿ ನಡೆಯುತ್ತದೆ.

೭. **ಮರಕೋತಿ ಆಟ:** ಇದು ಗಂಡುಮಕ್ಕಳ ಹೊರಾಂಗಣ ಆಟವಾಗಿದೆ. ಆಟದ ಹೆಸರೇ ಅರ್ಥವನ್ನು ಹೇಳುವಂತೆ ಮರದಿಂದ ಮರಕ್ಕೆ ಅಥವಾ ಒಂದು ದೊಡ್ಡ ಮರದಲ್ಲಿ ಕೊಂಬೆಯಿಂದ ಕೊಂಬೆಗಳಿಗೆ ಕೋತಿಯಂತೆ ನೆಗೆಯುವ ಆಟವಾಗಿದೆ. ಈ ಆಟದಲ್ಲಿ ಕಳ್ಳನಾದವನು ಹಾಗೂ ಮರದ ತುಂಡನ್ನು ಎಸೆಯುವವನ್ನು ಬಿಟ್ಟು ಉಳಿದವರೆಲ್ಲಾ ಮರಹತ್ತಿ ಕುಳಿತಿರುತ್ತಾರೆ. ಮರದ ತುಂಡು ಎಸೆಯುವವನು ಓಡಿಹೋಗಿ ಮರಹತ್ತಿ ಕುಳಿತುಕೊಳ್ಳುತ್ತಾನೆ. ಅಷ್ಟರಲ್ಲಿ ಕಳ್ಳನಾದವನು ಆ ಮರದ ತುಂಡನ್ನು ನಿರ್ದಿಷ್ಟ ಸ್ಥಳದಲ್ಲಿಟ್ಟು ಎಸೆದವನನ್ನು ಹಿಡಿಯಬೇಕು. ಹಾಗ ಬಿದ್ದರೆ ಉಳಿದವರು ಜಿಗಿದು ಮರದ ತುಂಡನ್ನು ಮುಟ್ಟಲು ಪ್ರಯತ್ನಿಸುತ್ತಾರೆ. ಹೀಗೆ ಮುಟ್ಟಿದರೆ ಅವನೇ ಪುನಃ ಕಳ್ಳ ಇಲ್ಲವಾದರೆ ಆತ ಯಾರನ್ನು ಮುಟ್ಟುತ್ತಾನೋ ಆತನೇ ಕಳ್ಳನಾಗುತ್ತಾನೆ. ಹೀಗೆ ನಿರಂತರವಾಗಿ ಆಟ ಮುಂದುವರೆಯುತ್ತದೆ.

೮. **ಗಿಲ್ಲಿದಾಂಡು:** ಇದು ಹೊರಾಂಗಣ ಆಟವಾಗಿದ್ದು, ಇದನ್ನು ಹಲವಾರು ಜನರು ಆಡುವಂತಹ ಆಟ. ಇಲ್ಲಿಯು ಮೂರರಿಂದ ನಾಲ್ಕು ಇಂಚಿನಷ್ಟು ಉದ್ದ ಇದ್ದು. ಎರಡೂ ಕಡೆ ಚೂಪಾಗಿ ಕೆತ್ತಿರುತ್ತಾರೆ. ದಾಂಡು ಒಂದರಿಂದ ಒಂದುಕಾಲು ಅಡಿಯಷ್ಟು ಉದ್ದವಿದ್ದು, ಇದನ್ನು ಹೆಚ್ಚು ದೂರಕ್ಕೆ ಹೊಡೆಯುವರೋ ಅವರೇ ಗೆಲವು ಪಡೆಯುತ್ತಾರೆ. ಗಿಲ್ಲಿ ಹೋಗಿದ್ದ ದೂರದಿಂದಲೂ ಸೋತವನು ಕುಂಟುತ್ತಲೋ ಅಥವಾ ನೆಗೆಯುತ್ತಲೊ! ಅಥವಾ ಪಲ್ಟಿಹೊಡೆಯುತ್ತಲೋ ಒಂದು ಗುರಿಯಬಳಿ ಮುಟ್ಟುವುದು.

೯. **ಹಸುಹುಲಿ ಆಟ:** ಈ ಆಟದಲ್ಲಿ ಗಂಡು ಮತ್ತು ಹೆಣ್ಣು ಮಕ್ಕಳು ಸಾಮೂಹಿಕವಾಗಿ ಲಿಂಗ ಭೇದವಿಲ್ಲದೆ ಭಾಗವಹಿಸುತ್ತಾರೆ. ನಮ್ಮ ಒಂದು ಪ್ರಾಂತ್ಯದಲ್ಲಿ ಈ ಹಸುಹುಲಿ ಆಟ ಆಧುನಿಕತೆಯ ಸೋಗಿನ ಆಟಗಳು ಬೆಳಕಿಗೆ ಬಂದಿದ್ದರೂ ಇದು ತನ್ನ ಅಸ್ತಿತ್ವವನ್ನು ಉಳಿಸಿಕೊಂಡುಬಂದಿದೆ. ಈ ಆಟವನ್ನು ಆಡುವ ಮುಂಚೆ ಮಕ್ಕಳೆಲ್ಲರೂ ಸೇರಿ ಕೈಕೈ ಜೋಡಿಸಿ ಚಪ್ಪಾಳೆಹಾಕಿ ಸೋತವನು ಹುಲಿಯಾಗಿ ಮತ್ತೊಬ್ಬ ಹಸು ಆಗಿರುತ್ತಾನೆ. ಮಕ್ಕಳು ಸುತ್ತ ಕೈ ಕೈ ಜೋಡಿಸಿಕೊಂಡು ನಿಂತಿರುತ್ತಾರೆ. ಹಸುವನ್ನು ಕೊಲ್ಲಲು ಅಥವಾ ಹಿಡಿಯಲು ಹುಲಿ ಮುಂದಾದರೆ ಅದನ್ನು ಪಡೆಯುತ್ತಾಋಎ. ಒಂದು ವೇಳೆ ಹುಲಿತಪ್ಪಿಸಿಕೊಂಡು ಹಸುವನ್ನು ಹಿಡಿದರೆ ಆತ ಔಟ್ ಎಂದು ತೀರ್ಮಾನಿಸುತ್ತಾರೆ.

೧೧) **ಕೋಲಾಟ:** ಈ ಜನಪದ ಕಲೆಯು ಈ ಗ್ರಾಮದಲ್ಲಿ ಬರುವ ಒಂದು ಮನರಂಜನೀಯವಾದ ಕಲೆಯಾಗಿದೆ. ಇದನ್ನು ಹಬ್ಬಹರಿದಿನಗಳಲ್ಲಿ ಮಾತ್ರವಲ್ಲದೆ ಹಾಲು ಬೆಳದಿಂಗಳಲ್ಲಿ ಆಡುವರು. ಇಲ್ಲಿನ ಜನರಿಗೆ ಉಲ್ಲಾಸವನ್ನೂ ಮುದವನ್ನೂ ನೀಡುತ್ತದೆ. ಹೆಚ್ಚಾಗಿ ಯುವಕರು ಪಾಲ್ಗೊಳ್ಳುವ ಈ ಕಲೆಯು ನೋಡಲು ಎಷ್ಟು ಆಕರ್ಷಕವೋ, ಅದೇ ಸಂದರ್ಭದಲ್ಲಿ ಹಾಡುವ ಪದಗಳೂ ಕೂಡ ಅಷ್ಟು ಮನರಂಜನೆ ನೀಡುತ್ತವೆ. ಇಲ್ಲಿನ ಕಲಾವಿದರು ಸಮವಸ್ತ್ರ ಧರಿಸಿ, ಕಾಲಿಗೆ ಗೆಜ್ಜೆಕಟ್ಟಿ, ತಲೆಗೆ ಸೊಂಟಕ್ಕೆ ಬಣ್ಣದ ಬಟ್ಟೆ ಕಟ್ಟಿಕೊಂಡಿರುತ್ತಾರೆ. ಇದರಲ್ಲಿ ಕಲಾವಿದರ ಸಂಖ್ಯೆ ಸಮನಾಗಿರುತ್ತದೆ. ಕೋಲಾಟದ ಸಂದರ್ಭದಲ್ಲಿನ ಪ್ರಸಿದ್ಧವಾದ ಹಾಡೊಂದು ಹೀಗಿದೆ–

"ಚೆಲುವಯ್ಯ ಚೆಲುವೋ ತಾನೀ ತಂದನಾ
ಚಿನ್ನ ನಾನಾರು ಕೇಳೋ ಕೋಲಣ್ಣ ಕೋಲೆ"

ಈ ಕಲೆಯಲ್ಲಿ ಹಲವಾರು ಭಂಗಿಗಳನ್ನು, ಆಡುವ ವಿಧಾನಗಳನ್ನೂ ನೋಡಬಹುದಾಗಿದೆ.

೧೨) **ರಂಗದ ಕುಣಿತ:** ಸಾಮಾನ್ಯವಾಗಿ ಗ್ರಾಮಪ್ರದೇಶಗಳಲ್ಲಿ ದೇವಸ್ಥಾನಗಳ ಮುಂದೆ ನಡೆಯುವಂತಹ ಕುಣಿತವಾಗಿದೆ. ಇದು ಕೇವಲ ವಾದ್ಯ ಸಂಗೀತಗಳಿಂದ ನಡೆಯುವ ಕುಣಿತವಾಗಿದೆ. ಇದಕ್ಕೆ ಹಿನ್ನೆಲೇ ಪದಗಳು ಇರುವುದಿಲ್ಲ. ದೇವಸ್ಥಾನಗಳ ಜಗುತಿಯ ಮೇಲೆ ನಡೆಯುವ ಒಂದು ಕುಣಿತವಾಗಿದೆ.

೧೩) **ವೀರಗಾಸೆ:** ಪ್ರತಿ ಹಳ್ಳಿಗಳಲ್ಲಿಯೂ ಶುಭಕಾರ್ಯಕ್ರಮಗಳನ್ನು ನೆರವೇರಿಸುವಾಗ, ಅದರಲ್ಲಿಯೂ ವಿವಾಹಗಳ ಸಂದರ್ಭಗಳಲ್ಲಿ ಈ ವೀರಗಾಸೆ ಕುಣಿತ ಹೆಚ್ಚು

ನಡೆಯುವಂತದ್ದಾಗಿದೆ. ಇದನ್ನು ವೀರಭದ್ರನ ಪ್ರತಾಪವನ್ನು ಹೇಳುವ ಕಲೆ ಎಂದೂ ಕರೆಯುತ್ತಾರೆ. ಲಿಂಗದ ವೀರರು ಈ ಕಲೆ ಪ್ರದರ್ಶಿಸುತ್ತಾರೆ. ಇವರ ವೇಷಭೂಷಣವು ತುಂಬಾ ವಿಶಿಷ್ಟವಾದದ್ದಾಗಿದೆ. ವೀರಭದ್ರ ೩೨ ಆಯುಧಗಳಿಂದ ಹುಟ್ಟಿಬಂದ ಎಂಬ ಪೌರಾಣಿಕ ಕಲ್ಪನೆಯಂತೆ ವೀರಭದ್ರನ ಪಾತ್ರ ದಾರಿಗಳು ಮುವತ್ತ ಎರಡು ಆಯುಧಗಳು, ಉಡುಪುಗಳನ್ನು ಧರಿಸುವುದು ವಾಡಿಕೆ. ನಡುವಿಗೆ ಹರಿ, ಶಿವ, ಬ್ರಹ್ಮ, ನರಸಿಂಹನ ತಲೆಯಿಂದ ಕೂಡಿದ ಚಿತ್ರವಿರುವ ನಡು ಪಟ್ಟಿ, ಮಂಡಿಗೆ ಜಂಗು, ಕಾಲಿಗೆ ಗೆಜ್ಜೆ, ಬಲಗೈಗೆ ಹರಿಸಿನ ಬಟ್ಟೆಯ ಕಂಕಣ ಕಟ್ಟಿರುತ್ತಾರೆ. ಬಲಗೈಯಲ್ಲಿ ಕತ್ತಿ, ಇದು ವೀರಭದ್ರನು ಹುಟ್ಟಿಬಂದಾಗ ಕತ್ತಿಯನ್ನು ಹಿಡಿದುಬಂದ ಸಂಕೇತ ಎಡಗೈಯಲ್ಲಿ ಘಂಟೆ ಕೈಗಳಿಗೆ ವಿಭೂತಿ ಪಟ್ಟೆ, ಮೈಗೆ ಕಾವಿ ಬಣ್ಣದ ನಿಲುವಂಗಿ, ಕಾಸೆ ಧರಿಸುವುದು ವಾಡಿಕೆ. ಕಿವಿಗೆ ರುದ್ರಾಕ್ಷಿ, ಹಣೆ ಹುಬ್ಬು ಕಿವಿಗಳಿಗೆ ವಿಭೂತಿ, ಕೊರಳುತೋಳು ಮುಂಗೈಗಳಲ್ಲಿ ರುದ್ರಾಕ್ಷಿಮಾಲೆ, ನಾಗಾಭರಣ ಎದೆಹತ್ತಿರ ವೀರಭದ್ರನ ಹಲಗೆ ಇವು ವೀರಗಾಸೆಯರ ಉಡುಗೆತೊಡುಗೆಗಳು.

**೧೪) ನಂದಿಕಂಬದ ಕುಣಿತ:** ಎಲ್ಲಾ ಹಳ್ಳಿಗಳಂತೆ ಇಲ್ಲಿಯೂ ಪ್ರತೀ ಹಬ್ಬ ಹರಿದಿನಗಳಲ್ಲಿ ಈ ನಂದಿಕಂಬದ ಉತ್ಸವ ನಡೆಯುತ್ತದೆ. ದೇವರುಗಳ ಮೆರವಣಿಗೆಯ ವೇಳೆ ದೇವರ ಮುಂದೆ ಇದರ ಕುಣಿತ ಸಾಗುತ್ತಿರುತ್ತದೆ. ಸುಮಾರು ಹದಿನೈದರಿಂದ ಇಪ್ಪತ್ತು ಅಡಿ ಅಷ್ಟು ಎತ್ತರವಿದೆ ಈ ನಂದಿಕಂಬ. ಒಂದು ಎತ್ತರವಾದ ಮರದ ಕಂಭಕ್ಕೆ ಹಿತ್ತಾಳೆಯಲ್ಲಿ ಅಥವಾ ಪಂಚಲೋಹದಿಂದ ಮಾಡಿದ ಗುಂಡಾಕಾರದಿಂದ ಮಾಡಿರುವ ಲೋಹದ ವಸ್ತುಗಳನ್ನು ಒಂದರಮೇಲೊಂದರಂತೆ ಸೇರಿಸಿ ಮೇಲೆ ಕೆಂಪುಬಟ್ಟೆಯನ್ನು ಕಟ್ಟಿರುತ್ತಾರೆ. ಇದನ್ನು ಉತ್ಸವಗಳಲ್ಲಿ ಯುವಕರು ಹೊತ್ತಿಕೊಂಡು ವಾದ್ಯಗಳ ತಾಳಕ್ಕೆ ತಕ್ಕಂತೆ ಕುಣಿಯುತ್ತಾರೆ. ಇದು ಒಂದು ಕ್ವಿಂಟಾಲ್‌ಗೂ ಹೆಚ್ಚು ತೂಕವಿದೆ.

**೧೫) ಜನಪದ ಭಾಷೆ:** ಜನಪದ ಭಾಷೆಗೂ ಶಿಷ್ಟ ಭಾಷೆಗೂ ಬಹಳಷ್ಟು ವ್ಯತ್ಯಾಸವಿದೆ. ಜನಪದ ಜೀವನ ಹೇಗೆ ಭಿನ್ನವೋ ಹಾಗೆಯೇ ಭಾಷೆಯೂ ಭಿನ್ನವಾಗಿರುತ್ತದೆ. ಶಿಷ್ಟ ಭಾಷೆಗೆ ವಿರುದ್ಧವಾದ ನೆಲೆ, ಉಚ್ಚಾರಣಾ ವಿಧಾನ, ಬಳಕೆ ಜನಪದ ಭಾಷೆಯದು ಕ್ಯಾತನಹಳ್ಳಿಯು ಮೈಸೂರಿಗೆ ಹತ್ತಿರದಲ್ಲಿದ್ದರೂ ಕೂಡ ಇಲ್ಲಿನ ಭಾಷೆಯ ಮೇಲೆ ನಗರಭಾಷೆ ಯಾವುದೇ ಪರಿಣಾಮಗಳನ್ನು ಬೀರಿಲ್ಲ. ಬೀರಿದ್ದರೂ ಅದು ಬಹಳ ಕಡಿಮೆ. ಇಲ್ಲಿ ಹಳ್ಳಿಭಾಷೆ ಆಡುಭಾಷೆಯಾಗಿಯೇ ಇದೆ. ಅನಕ್ಷರಸ್ಥರೇ ಹೆಚ್ಚಾಗಿರುವುದರಿಂದ ಇಲ್ಲಿ ಜನಪದ ಭಾಷೆ ಉಳಿದಿದೆ ಎನ್ನಬಹುದು, ಮಕ್ಕಳನ್ನು ಮಾತನಾಡಿಸುವಾಗ 'ಕೂಸೇ, ಬಾರ್ಲಾ, ಯಾಕ್ಲಾ, ಮುದೇವಿ, ಅನ್ನುವಂತಹ ಗ್ರಾಮ್ಯ ಶಬ್ದಗಳು, ಬೈಗುಳಗಳನ್ನು ಸೇರಿಸಿ ಮಾತನಾಡುತ್ತಿರುತ್ತಾರೆ. ಜೊತೆಗೆ ಗಾದೆಗಳನ್ನು,

ಒಗಟುಗಳನ್ನು ಪದೇ ಪದೇ ತಮ್ಮ ಮಾತುಗಳಲ್ಲಿ ಉಪಯೋಗಿಸಿಕೊಳ್ಳುವುದೂ ಕೂಡ ಇಲ್ಲಿನ ಜನರ ಒಂದು ಕಲೆಯೇ ಸರಿ. ಭಾಷೆ ಎನ್ನುವುದು ನಿಂತ ನೀರಾಗಿರದೂ ಸದಾ ಹರಿಯುವಂತ ನೀರಿನ ಹಾಗೆ, ಇದು ಕಾಲದಿಂದ ಕಾಲಕ್ಕೆ, ಸ್ಥಳದಿಂದ ಸ್ಥಳಕ್ಕೆ ಬದಲಾವಣೆಯಾಗುತ್ತಾ ಸಾಗುವಂತದ್ದು. ಇಲ್ಲಿ ಮೈಸೂರು ಪ್ರಾದೇಶಿಕ ಭಾಷೆಯು ಹೆಚ್ಚಾಗಿ ಹರಡಿದೆ. ಯಾವುದೂ ತಳುಕು-ಬಳುಕಿನ ಮಾತುಗಳನ್ನು ಆಡದೇ 'ನೇರ, ದಿಟ್ಟ, ನಿರಂತರ'ತೆಯನ್ನು ಕಾಯ್ದುಕೊಳ್ಳುವುದೇ ಈ ಊರಿನ ಜನರ ಒಂದು ಗುಣ.

**ಸಾಹಿತ್ಯ ಮತ್ತು ಕೊಡುಗೆಗಳು**

ಕ್ಯಾತನಹಳ್ಳಿಯು ತುಂಬಾ ಹಳೆಯ, ಪ್ರಾಚೀನ ಊರಾಗಿರುವುದರಿಂದ ಇಲ್ಲಿ ತುಂಬಾ ಶ್ರೀಮಂತಿಕೆಯ ಸಾಹಿತ್ಯವು ಕಂಡುಬರುತ್ತದೆ. ಸಾಹಿತ್ಯ ಎಂದಮೇಲೆ ಇದರಲ್ಲಿ ಜಾನಪದ ಸಾಹಿತ್ಯವೂ ಮುಖ್ಯವಾದದ್ದು. ಜಾನಪದ ಸಾಹಿತ್ಯ ಮೌಖಿಕವಾಗಿ ಬೆಳೆದಂತಹ ಸಾಹಿತ್ಯವಾಗಿದೆ.

ಜಾನಪದ ಸಾಹಿತ್ಯ, ಶಿಷ್ಟ ಸಾಹಿತ್ಯ ಎರಡೂ ಒಂದೇ ನಾಣ್ಯದ ಎರಡು ಮುಖಗಳಂತಿದ್ದರೂ ಜಾನಪದ ಸಾಹಿತ್ಯವೇ ಮಿಕ್ಕೆಲ್ಲಾ ಸಾಹಿತ್ಯಕ್ಕೆ ತಾಯಿಬೇರಾಗಿದ್ದು, ಮುಖ್ಯ ಅಡಿಪಾಯವಾಗಿದೆ. ಜಾನಪದ ಸಾಹಿತ್ಯದಲ್ಲಿ ಗದ್ಯ ಕಥನಗಳು, ಪುರಾಣಗಳು, ಗೀತೆಗಳು, ಒಗಟು, ಗಾದೆ, ಒಡಪು ಹೀಗೆ ಹಲವಾರು ಸಾಹಿತ್ಯ ಪ್ರಕಾರಗಳು ಕಂಡುಬರುತ್ತವೆ. ಇಲ್ಲಿ ಜಾನಪದ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಗಳನ್ನು ನೀಡದಿದ್ದರೂ ಕ್ಯಾತನಹಳ್ಳಿಯಲ್ಲಿ ಈ ಸಾಹಿತ್ಯ ಪ್ರಮುಖವಾಗಿ ಕಾಣುತ್ತದೆ. ಅಂದರೆ ಇಲ್ಲಿ ಸುಗ್ಗಿ ವೇಳೆ ಸುಗ್ಗಿ ಗೀತೆಗಳನ್ನು ಹಾಡುತ್ತಾರೆ. ಮದುವೆ, ಶೋಬಾನದಂತಹ ಸಮಯದಲ್ಲಿ ಶೋಭಾನೆ ಪದಗಳನ್ನು ಹೇಳುತ್ತಾರೆ. ಯಾರಾದರೂ ಮರಣ ಹೊಂದಿದಾಗ ಶೋಕ ಗೀತೆಗಳನ್ನು ಹೇಳುತ್ತಾರೆ. ಹಾಗೆಯೇ ನಾಟಿ ಮಾಡುವಾಗ, ಕುಯ್ಲು ಮಾಡುವಾಗ, ಒಕ್ಕಣೆ ಮಾಡುವಾಗ, ಗೀತೆಗಳನ್ನು ಹಾಡುತ್ತಾ ಹೊಲದ ಕೆಲಸಗಳನ್ನು ಕೈಗೊಳ್ಳುತ್ತಾರೆ. ಇದರಿಂದ ಅವರಿಗೆ ಶ್ರಮ ಕಡಿಮೆಯಾಗುತ್ತದೆಯಂತೆ.

ಹಾಗೆಯೇ ಒಬ್ಬರಿಗೊಬ್ಬರು ಪರಸ್ಪರ ಜಗಳಮಾಡುವಾಗ ಗಾದೆ ಮಾತುಗಳನ್ನು ಬಳಸಿ ಬೈಯ್ಯುವುದೂ ಕಂಡುಬರುತ್ತದೆ. ಹಬ್ಬ-ಹರಿದಿನಗಳಲ್ಲಿ ಬೇಸಿಗೆಯ ಸಂದರ್ಭಗಳಲ್ಲಿ ಕೃಷಿ ಕಾಯಕಗಳು ಮುಗಿದಿದ್ದಾಗ ಬಿಡುವಿನ ವೇಳೆಯಲ್ಲಿ ಜನರು ಗುಂಪಾಗಿ ಸೇರಿ ಜಾನಪದ ಸಾಹಿತ್ಯವನ್ನೇ ಸೃಷ್ಟಿಮಾಡಿಬಿಡುತ್ತಾರೆ. ಒಬ್ಬರಿಗೊಬ್ಬರು ಪಂದ್ಯ ಕಟ್ಟಿಕೊಂಡು ಒಗಟು ಬಿಡಿಸುವುದು, ಸೋತರೆ ತನ್ನ ಜಮೀನಿನಲ್ಲಿ ಒಂದು ದಿನ ಬಿಟ್ಟಿ ಕೆಲಸ ಮಾಡಿಕೊಡುವುದು ಹೀಗೆ ಜಾನಪದ ಸಾಹಿತ್ಯವು ಹಳ್ಳಿ ಪ್ರದೇಶಗಳಲ್ಲಿ

ಹುಟ್ಟಿ ಬೆಳೆದು ಹೀಗೆ ಹಲವರ ಪರಿಶ್ರಮದಿಂದ ಗ್ರಂಥರೂಪು ಪಡೆಯುತ್ತವೆ. ಹಬ್ಬದ ಸಂದರ್ಭದಲ್ಲಿ ದೇವರ ಮೆರವಣಿಗೆ ಮಾಡುವಾಗ, ಹರಿಕಥೆ ಓದುವಾಗ ಜನಪದ ಗೀತೆಗಳನ್ನು ಹಾಡುತ್ತಾರೆ. ಇನ್ನು ಬಿಡುವಿನ ವೇಳೆ ರಮಣೀಯ ಜನಪದ ಕಥೆಗಳನ್ನು ಬಹಳ ಸುಂದರವಾಗಿ ಹೇಳುತ್ತಾರೆ. ಜನಪದರು ಹೆಚ್ಚಾಗಿ ಕಲ್ಪನೆಯ ಕಥೆಗಳನ್ನು ಹೇಳುತ್ತಾರೆ. ಹಾಜರ ಕಥೆಗಳು – ರಾಣಿಯರ ಕಥೆಗಳು, ರಾಕ್ಷಸನ ಕಥೆಗಳು, ಪ್ರಾಣಿ–ಪಕ್ಷಿಗಳ ಕಥೆಗಳು, ದೇವರ ಕಥೆಗಳು, ಹೀಗೆ ಅನೇಕ ಪ್ರಕಾರದ ಕಥೆಗಳನ್ನು ಹೇಳುತ್ತಾರೆ. ಕ್ಯಾತನಹಳ್ಳಿಯಲ್ಲಿ ಈ ತೆರನಾದ ಜಾನಪದ ಸಾಹಿತ್ಯವು ಇದ್ದು, ಹಿಂದೆ ಈಗಿರುವುದಕ್ಕಿಂತ ಬಹಳ ಶ್ರೀಮಂತವಾಗಿತ್ತೆಂದು ಹಿರಿಯರು ಹೇಳುತ್ತಾರೆ. ಆದರೆ ಈ ಜಾನಪದ ಸಾಹಿತ್ಯವು ಕೇವಲ ಮೌಖಿಕವಾಗಿ ಬೆಳೆದು ಬಂದಿದೆಯೇ ಹೊರತು ಗ್ರಂಥರೂಪಕ್ಕೆ ಇಲ್ಲಿ ಯಾರೊಬ್ಬರೂ ತರದೇ ಇರುವುದು ವಿಷಾದದ ಸಂಗತಿ, ಜಾನಪದ ಸಾಹಿತ್ಯದಲ್ಲಿ ಕೆಲಸ ಮಾಡಿದರೆ, ಇಲ್ಲಿ ಮಡಿವಂತಿಕೆಯನ್ನು ಬಿಟ್ಟು, ಸಂಗ್ರಹ, ಸಂಶೋಧನೆಯಲ್ಲಿ ತೊಡಗಿದರೆ ಮಾತ್ರ ಸಾಧ್ಯ. ಕ್ಯಾತನಹಳ್ಳಿ ಜಾನಪದ ಸಾಹಿತ್ಯದಲ್ಲಿ ಒಂದು ಶ್ರೀಮಂತ ಹಳ್ಳಿ ಎಂದು ಹೇಳಲು ನಾನು ಹೆಮ್ಮೆಪಡುತ್ತೇನೆ.

ಪ್ರತೀ ಹಳ್ಳಿಯಲ್ಲಿಯೂ ಅದರದೇ ಆದ ಜಾನಪದ ಇತಿಹಾಸವನ್ನು ಹೊಂದಿರುತ್ತವೆ. ಅದು ಈಗಾಗಲೇ ನಿಜವಾಗಿದ್ದು, ಅದು ಒಂದು ಸಂಸ್ಕೃತಿಯ ಧ್ಯೋತಕವಾಗಿದೆ. ಈ ಊರಿನಲ್ಲಿ ಜಾನಪದ ಸಾಹಿತ್ಯಕ್ಕೂ ಸಂಬಂಧಿಸಿದಂತೆ ಯಾರೂ ಕೂಡ ಇದುವರೆಗೂ ಯಾವುದೇ ರೀತಿಯ ಕ್ಷೇತ್ರಕಾರ್ಯ ಮಾಡಿಯೂ ಇಲ್ಲ, ಜೊತೆಗೆ ಸಂಗ್ರಹಿಸಿಯೂ ಇಲ್ಲ. ಇವು ಅನಕ್ಷರಸ್ಥರಿಂದಲೇ ರಚನೆಯಾಗಿರು–ವುದರಿಂದ, ಇವು ಕಂಠಸ್ತರೂಪವಾಗಿರುವುದರಿಂದ ಮೌಖಿಕವಾಗಿ ಬೆಳೆದು ಬಂದಿರುವಂತಹದ್ದು. ಶಿಷ್ಟ ಸಾಹಿತ್ಯವು ಗ್ರಂಥಸ್ತರೂಪದಲ್ಲಿರುವುಧರಿಂದ ಜಾನಪದ ಸಾಹಿತ್ಯಕ್ಕೆ ಯಾವುದೇ ರೂಪವಿಲ್ಲದಿರುವುದರಿಂದ ಜಾನಪದ ಸಾಹಿತ್ಯಕ್ಕೆ ಯಾವುದೇ ರೂಪವಿಲ್ಲದಿರುವುದರಿಂದ ಜಾನಪದ ಸಾಹಿತ್ಯವು ನಶಿಸಿಹೋಗುತ್ತಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಇದರ ಅರಿವುಂಟಾಗುತ್ತಿರುವುದರಿಂದ ಇದರ ಬಗೆಗೆ ಹೆಚ್ಚಿನ ಸಂಶೋಧನೆಗಳು ನಡೆಯುತ್ತಿವೆ. ಕ್ಯಾತನಹಳ್ಳಿಯಲ್ಲಿ ಪ್ರತೀಮನೆಯಲ್ಲಿಯೂ ಒಬ್ಬರು ಹಿರಿಯರು ಇರುವುದು ವಿಶೇಷ. ಇವರುಗಳಿಂದ ಇವರ ಮುಂದಿನ ಪೀಳಿಗೆಯವರಿಗೆ ಜಾನಪದ ಸಾಹಿತ್ಯವು ಹರಿಯುತ್ತದೆ. ಈ ಹಿರಿಯರಿಗೆ ಅವರ ಹಿಂದಿನ ತಲೆಮಾರಿನಿಂದ ಬಂದಂತಹ ಕೊಡುಗೆಗಳಾಗಿರುತ್ತವೆ. ಹಿರಿಯರು ಹಿಂದಿನ ಹಾಗೂ ಮುಂದಿನ ಪೀಳಿಗೆಯ ಕೊಂಡಿಯಂತೆ ಇರುತ್ತಾರೆ.

ಇಲ್ಲಿನ ಜಾನಪದ ಸಾಹಿತ್ಯ ಕೊಡುಗೆಯಲ್ಲಿ ಒಗಟುಗಳನ್ನು ನೋಡಬಹುದು. ಆಕಾಶವನ್ನು ಕುರಿತಾದ ಒಗಟುಗಳಲ್ಲಿ ಒಂದೊಂದರಲ್ಲಿ ವಿಭಿನ್ನವಾದ ನವ್ಯ ಕಲ್ಪನಾವಿಲಾಸವನ್ನು ಕಾಣಬಹುದು. 'ಅಮ್ಮನ ಸೀರೆ ಮಡಿಸೋಕಾಗೋಲ್ಲ; ಅಪ್ಪನ ದುಡ್ಡು ಎಣಿಸೋಕಾಗೋಲ್ಲ' ಎಂದರೆ ಆಕಾಶ ಮತ್ತು ನಕ್ಷತ್ರಗಳು. ಈ ಒಗಟು ಕಟ್ಟಿದವರಿಗೆ ನೀಲಿ ಆಗಸ ಅಮ್ಮನ ಸೀರೆಯಂತೆ ತೋರಿದೆ. ಲೋಕವನ್ನೆಲ್ಲಾ ಆಚ್ಛಾದಿಸಿ ನೆರಳಾಗಿ ನಿಂತಿರುವ ಆಕಾಶವನ್ನು ಈ ಜಾನಪದರು ಅತ್ಯಂತ ಆತ್ಮೀಯವಾಗಿ ಕಂಡಿದ್ದಾರೆ. ಮತ್ತೊಂದು ಒಗಟು ಈ ರೀತಿ ಇದೆ. 'ಅಂಗೈ ಅಗಲದ ರೊಟ್ಟಿಗೆ ಲೆಕ್ಕವಿಲ್ಲದಷ್ಟು ಉಪ್ಪಿನಕಾಯಿ'. ಇಲ್ಲಿ ರೊಟ್ಟಿ ಎಂದರೆ ಚಂದ್ರ, ಉಪ್ಪಿನಕಾಯಿ ಎಂದರೆ ನಕ್ಷತ್ರಗಳು ಈ ಕಲ್ಪನೆ ವಿಲಕ್ಷಣವೆನಿಸಿದರೂ ಅಪೂರ್ವವಾಗಿದೆ. ಹೀಗೆಂದೇ 'ನೀಲಿ ಕೆರೆಯಲ್ಲಿ ಬಿಳಿಯ ಮೀನು' ಎಂಬ ಒಗಟೊಂದು ದಾರಿಯನ್ನು ಸೂಚಿಸುತ್ತದೆ. ರುಮಾಲಿನ ಪಟ್ಟಿಯಂತೆ ಈ ಜನಪದರಿಗೆ ಗೋಚರಿಸುತ್ತದೆ.

'ಅಂಗೈ ಅಗಲದ ಗದ್ದೆ ಗದ್ದೆಗೆ ನೀರು ನೀರಿಗೆ ಬೇರು ಬೇರಿಗೆ ಬೆಂಕಿ' ಎಂದಾಗಲೀ, 'ಚಿನ್ನದ ಗಿಣಿ ಬಾಲದಲ್ಲಿ ನೀರು ಕುಡಿಯುತ್ತೆ' ಎಂದಾಗಲೀ ದೀಪವನ್ನು ಬಣ್ಣಿಸುವ ರೀತಿ ಬಹು ಚಮತ್ಕಾರಯುತವಾಗಿದೆ. ಹಾಗೆಯೇ 'ಹಿಡಿದರೆ ಹಿಡಿತುಂಬ ಬಿಟ್ಟರೆ ಮನೆತುಂಬ' ಎಂಬ ಚಿತ್ರ ಎಷ್ಟು ಸಂಕ್ಷಿಪ್ತ, ಸಹಜ ಸುಂದರ, 'ಚಿನ್ನದ ಪೆಟ್ಟಿಗೆಯಲ್ಲಿ ಬೆಳ್ಳಿ ಲಿಂಗ' ಎಂಬ ಒಗಟು ಹಲಸಿತ ತೊಳೆ ಮತ್ತು ಬೀಜಗಳನ್ನು ನಿರ್ದೇಶಿಸುತ್ತದೆ. ಹಲಸಿನ ತೊಳೆಯ – ಹೊಂಬಣ್ಣವನ್ನು ಕವಿಯು ಗಮನಿಸಿರುವುದಿರಲಿ, ಒಳಗಿನ ಬೀಜವನ್ನು ಬೆಳ್ಳಿಯ ಲಿಂಗವನ್ನಾಗಿ ಕಂಡಿರುವುದು ಒಂದು ವಿಶೇಷಾನುಭವವೇ ಸರಿ. 'ಹಸಿರು ಗಿಡದ ಮೇಲೆ ಮೊಸರು ಚೆಲ್ಲಿದೆ' ಎನ್ನುವುದು ಮಲ್ಲಿಗೆ ಹೂವಿನ ಚೇತೋಹಾರಿಯಾದ ವರ್ಣನೆ. ಮಲ್ಲಿಗೆ ಹೂವು ಮೊಸರಿನಂತಿದೆ ಎಂದು ಸ್ಪಷ್ಟವಾಗಿ ಹೇಳುವುದಾದರೆ ಇದಕ್ಕಿಂತ ಮೇಲಾದ ಕಾವ್ಯ ಮತ್ತೇಲಿದೆ? ಮಲ್ಲಿಗೆಗೂ ಮೊಸರಿಗೂ ನಿಕಟ ಸಾದೃಶ್ಯವಿದೆ. ಬರಿಯ ಬಣ್ಣದಲ್ಲಿಲ್ಲ, ರಚನಾ ವಿನ್ಯಾಸದಲ್ಲಿ ಎಷ್ಟು ಜನ ಇದನ್ನು ಲಕ್ಷಿಸಿರಬಹುದು? ಈರುಳ್ಳಿಯ ಒಂದು ಯಥಾವತ್ತಾದ ಚಿತ್ರಣವನ್ನು 'ಅಡ್ಡಕೊಯ್ತರೆ ಚಕ್ರವಲ್ಲ, ಉದ್ದ ಕೊಯ್ದರೆ ಶಂಖದಂತೆ ಕಾಣುತ್ತದೆ! ತಾನೆ ಮತ್ತೊಂದು ಒಗಟು ಈರುಳ್ಳಿಯನ್ನು ಹಾಸ್ಯಪೂರ್ವಕವಾಗಿ ಬಣ್ಣಿಸುತ್ತದೆ. 'ಕಾವಿ ಕಮಂಡಲ ಧರಿಸಲೋದೋರಾರು, ಮೂರು ತಿಂಗಳು ಭೂಮೀಲಿದ್ದೋರಾರು, ಗುದ್ದಪ್ಪನವರು ಎಬ್ಬಿಸಿದೋರ‍್ಯಾರು? ಯಾರೋ ಹಠಯೋಗಿಯ ವಿಷಯವಿರಬೇಕೆನಿಸುತ್ತದೆ, ಮೊದಲು. ಆದರೆ ಈರುಳ್ಳಿಯ ಕತೆಯೆಂದಾಗ ನಗು ಬರುತ್ತದೆ. 'ಚಿಪ್ಪುಂಟು ಆಮೆಯಲ್ಲ ಜುಟ್ಟುಂಟು

ಪೂಜಾರಿಯಲ್ಲ, ಮೂರು ಕಣ್ಣುಂಟು ಹರನಲ್ಲ', ತೆಂಗಿನಕಾಯಿ ಚಿತ್ರವೂ ಮನೋಜ್ಞ ಹಾಗೂ ನಿಖರವಾಗಿದೆ. ಹೀಗೆಯೇ ಒಗಟುಗಳಲ್ಲೂ ವ್ಯಕ್ತವಾಗುವ ಸಾಮ್ಯಪ್ರಜ್ಞೆ ಅದ್ಭುತವಾದುದು. ಇಂತಹ ಭಾವಾನುಭಾವಗಳು ಜನಪದರಲ್ಲಿ ಲಭ್ಯವೇ ಹೊರತು ಪಂಡಿತ ಕವಿಗಳಲ್ಲಿಲ್ಲ.

ಒಗಟುಗಳ ಅಂತರಾರ್ಥ ಸುಲಭಗಮ್ಯವಲ್ಲದಿರಬಹುದು. ಆದರೆ ಅವುಗಳ ಬಾಹ್ಯರೂಪ ಮಾತ್ರ ಯಾವಾಗಲೂ ಆಕರ್ಷಕವಾಗಿರುತ್ತದೆ. ಇಲ್ಲದಿದ್ದರೆ ಒಗಟು-ಗಳಲ್ಲಿ ಯಾರಿಗೂ ಕುತೂಹಲ ಹುಟ್ಟದಿರಬಹುದು. ಎಂತಲೇ ಥಟ್ಟನೆ ಮನಸ್ಸನ್ನು ಸೆಳೆಯುವಂತೆ ಆಸಕ್ತಿ ಕೆರಳಿಸುವಂತೆ, ಆಲೋಚನೆಯನ್ನು ಚೋದಿಸುವಂತೆ ಒಗಟುಗಳ ರಚನೆಯಾಗಿರುತ್ತದೆ. ಕಿವಿಗೆ ಸ್ವಾದವಾಗುವ ಪ್ರಾಸಾನುಪ್ರಾಸ ಪರಂಪರೆ, ಲಯ ವೈವಿಧ್ಯ ಒಗಟುಗಳಲ್ಲಿ ಮೇಳವಿಸಿರುತ್ತದೆ. ತಲೆ ತಿನ್ನುವ ಸಮಸ್ಯೆಯಾದುದು ಅದರ ರೀತಿ ಸರಸವಾಗಿರಲೇಬೇಕು. ಇಂತಹ ಸಮಸ್ಯೆಯನ್ನು ತಂದೊಡ್ಡಬಲ್ಲ ಒಗಟು ಹೇಳುವುದರಲ್ಲಿಯೂ ಜಾನಪದರು ಎತ್ತಿದ ಕೈ. ಈ ಊರಿನ ಹಿರಿಯರು ಇಂತಹ ಒಗಟುಗಳನ್ನು ಹಾಕುವುದರಲ್ಲಿ ನಿಸ್ಸೀಮರು. 'ಅಕ್ಕ ಅಕ್ಕ ಗಿಡನೋಡು, ಗಿಡದ ತುಂಬ ಜಡೆ ನೋಡು, ಜಡೆ ಬಿಚ್ಚಿ ವಾಸನೆ ನೋಡು(ಏಲಕ್ಕಿ) ಎಂದಾಗ ಏನೂ ಅರ್ಥವಾಗದಿದ್ದರೂ ಮಕ್ಕಳು ಬೆರಗುಗಣ್ಣಿನಿಂದ ನೋಡಿಯೇ ನೋಡುತ್ತವೆ. ಒಮ್ಮೆ ಕುತೂಹಲ ಗರಿಗೆದರಿದ ಮೇಲೆ ಬುದ್ಧಿ ಸಹಜವಾಗಿ ಕೆಲಸಕ್ಕೆ ತೊಡಗುತ್ತದೆ. ಬಹುಪಾಲು ಒಗಟುಗಳ ನಿರೂಪಣೆ ಹಾಸ್ಯಲಿಪ್ತವಾಗಿಯೇ ಇರುತ್ತದೆ. ಎಷ್ಟೋ ವೇಳೆ ಮೇಲುನೋಟಕ್ಕೆ ಅಸಭ್ಯವೆನಿಸುವಂತೆ ಒಗಟುಗಳು ಕಂಡುಬಂದರೂ ಅವುಗಳ ಅರ್ಥ ಸಾಮಾನ್ಯವಾಗಿಯೇ ಇರುವುದೂ ಉಂಟು. ಇಂಗಿತವೂ ಬೇರೆಯೇ ಇರುತ್ತದೆ.

ಈ ಊರಿನ ಹಿರಿಯ ಅಜ್ಜಿ 'ಪುಟ್ಟಮ್ಮ' ಅವರು ಹಲವಾರು ಒಗಟುಗಳನ್ನು ನಮ್ಮೊಂದಿಗೆ ಹಂಚಿಕೊಂಡರು. ಉದಾಹರಣೆಗೆ: 'ಗಿಡ್ಡಿ ಗುದ್ದಿದರೆ ಮನೆಯೆಲ್ಲ ಮಕ್ಕಳು' (ಬೆಳ್ಳುಳ್ಳಿ) ಎಂಬುದು. ಇನ್ನೊಂದು 'ಒಬ್ಬನನ್ನು ಕಟ್ಟಿದೆ, ಒಬ್ಬನನ್ನು ಬಿಟ್ಟಿದೆ, ಒಬ್ಬನನ್ನು ಕರಕೊಂಡು ಒಳಗ್ಹೋದೆ' ಇಲ್ಲಿ ಅಶ್ಲೀಲವಿದೆ ಎನಿಸುವುದು ಸಹಜ. ಆದರೆ 'ಹಸುವನ್ನು ಕಟ್ಟಿದೆ, ಕರುವನ್ನು ಬಿಚ್ಚಿದೆ, ಹಾಲನ್ನು ಕರಕೊಂಡೊಳಗೋದಿ' ಎಂಬ ಉತ್ತರ ಕೇಳಿದಾಗ ನಗು ತಾನಾಗೇ ಬರುತ್ತದೆ. ಒಗಟುಗಳಲ್ಲಿ ಪ್ರಕೃತಿಗೆ ಸಂಬಂಧಿಸಿದ ಒಗಟಿನದೇ ದೊಡ್ಡ ಗುಂಪಾಗಿರುತ್ತದೆ.

ಪ್ರಾಚೀನ ಭಾರತದಲ್ಲಿ ಪ್ರಹೇಳಿಕೆಗಳನ್ನು ಬಿಡಿಸುವುದು ಅರವತ್ತು ನಾಲ್ಕು ವಿದ್ಯೆಗಳಲ್ಲಿ ಒಂದಾಗಿತ್ತೆಂಬುದು ಗಮನಾರ್ಹ. ಒಗಟುಗಳ ಮೇಲೆ ಕಟ್ಟಿ ಜೂಜಾಡುವ

ಪದ್ಧತಿಯೂ ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುತ್ತದೆ. ಒಗಟಿಗೆ ಸಂಬಂಧಿಸಿದಂತಹ ದ್ಯೂತ, ಸ್ಪರ್ಧೆ, ಮೇಳ, ಸಮಾರಂಭಗಳು ಗ್ರೀಕರಲ್ಲಿ ವಿಪರೀತವಾಗಿದ್ದವು. ಹೆಸಿಯಡ್ ಮತ್ತು ಹೋಮರ್ ಕವಿಗಳ ನಡುವೆ ನಡೆದ ಒಗಟಿನ ಸ್ಪರ್ಧೆಯೊಂದರಲ್ಲಿ ಎದುರಾಳಿಯ ಒಗಟನ್ನುತ್ತರಿಸಲಾರದೆ ಹೋಮರ್ ಪ್ರಾಣ ತೆತ್ತನೆಂದು ಪ್ರತೀತಿಯಿದೆ. ಅನೇಕ ಗ್ರೀಕ್ ರುದ್ರನಾಟಕಗಳಲ್ಲಿ ಒಗಟುಗಳೇ ಕ್ರಿಯಾಪರಂಪರೆಗೆ ಜಾಲಶಕ್ತಿಯಾಗಿ ಕೆಲಸ ಮಾಡಿರುವುದುಂಟು. ಸ್ಫಿಂಕ್ಸ್‌ಭೂತ ಈಡಿಪಸನಿಗೆ ಒಡ್ಡಿದ ಸಮಸ್ಯೆ ಜಗದ್ವಿಖ್ಯಾತವಾದುದು. ಅದು ಜಗತ್ತಿನ ಪುರಾತನತಮ ಒಗಟುಗಳಲ್ಲೊಂದಾದ; 'ಬೆಳಗ್ಗೆ ನಾಲ್ಕು ಕಾಲು, ಮಧ್ಯಾಹ್ನ ಎರಡು ಕಾಲು, ಸಂಜೆ ಮೂರು ಕಾಲು ಈ ಪ್ರಾಣಿ ಯಾವುದು? ಇದಕ್ಕೆ ಉತ್ತರ ಮನುಷ್ಯ. ಈ ಒಗಟಿನಲ್ಲಿ ಒಂದು ದಿನದ ಅವಧಿ ಇಡೀ ಮಾನವ ಜೀವಿತವನ್ನು ಸಂಕೇತಿಸುತ್ತದೆ. ಅಜ್ಞಾತ ಜಾನಪದರಲ್ಲದೆ ಎಷ್ಟೋ ಮಂದಿ ವರಿಷ್ಠ ಕವಿಗಳು ಒಗಟುಗಳ ಕೃಷಿಗೆ ಯತ್ನಿಸಿರುವುದುಂಟು. ನಿದರ್ಶನಕ್ಕೆ ಜರ್ಮನಿಯ ಮಹಾಕವಿ ಷಿಲ್ಲರ್ ಒಗಟುಗಳ ಬೆಳವಣಿಗೆಗೆ ವಿಶೇಷ ಶ್ರಮಿಸಿ, ಅವುಗಳಿಗೆ ಸಾಹಿತ್ಯ ಶಕ್ತಿಯನ್ನು ತುಂಬಿದನೆಂಬುದು ಚಾರಿತ್ರಿಕ ಸಂಗತಿ.

ಇಲ್ಲಿನ ಜಾನಪದೀಯ ಸಾಹಿತ್ಯದಲ್ಲಿ ಮುಖ್ಯವಾಗಿ ಮತ್ತೊಂದು ವಿಧವನ್ನು ನೋಡಬಹುದು. ಅದು 'ಗಾದೆಗಳು'. ಇದು ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಒಂದು. ಅತ್ಯಂತ ಪ್ರಾಚೀನವೂ ವಿಶಿಷ್ಟವೂ ಆದದ್ದು. ಗಾದೆಗಳಿಗೂ ಜೀವನಕ್ಕೂ ಅವಿನಾಭಾವ ಸಂಬಂಧ. ಎಂತಲೇ ಅದು ಇತರ ಜನಪದ ಸಾಹಿತ್ಯ ರೂಪಗಳಿಗಿಂತ ಹೆಚ್ಚು ವ್ಯಾಪಕ. ಗಾದೆ ವೇದಕ್ಕೆ ಸಮಾನ, ಎಂಬುದು ಗಾದೆಯನ್ನು ಕುರಿತು ಒಂದು ಗಾದೆ ಮಾತು. ಇದು ಹಿರಿಯರ ಮಾತುಗಳೇ ಆಗಿವೆ. ವೇದದಂತೆಯೇ ಗಾದೆಯೂ ಅಜ್ಞಾತಕರ್ತೃವಾಗಿ ವಾಕ್ಯಪರಂಪರೆಯಲ್ಲಿ ಸಾಗಿ ಬಂದದ್ದು, ಪ್ರಾಚೀನತಮವಾದದ್ದು. ಆಧ್ಯಾತ್ಮ ಭೂಮಿಕೆಯಲ್ಲಿ ವೇದ ಹೇಗೋ ಹಾಗೆ ಲೌಕಿಕ ಭೂಮಿಕೆಯಲ್ಲಿ ಪ್ರಮಾಣಭೂತವಾದದ್ದು ಎಂಬುದು ಈ ಹೇಳಿಕೆಯ ಅಭಿಪ್ರಾಯವಿದ್ದಿತು. 'ವೇದ' ಎಂದರೆ ಜ್ಞಾನ ಎಂದರ್ಥ. 'ವೇದಗಳು ಅನಂತ' ಎಂಬ ಮಾತೂ ಉಂಟು. ಗಾದೆಗಳ ಸ್ವರೂಪದ ಮೇಲೆ ಈ ಅಂಶಗಳೂ ಬೆಳಕು ಚೆಲ್ಲುತ್ತವೆ. 'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬ ಗಾದೆಯೂ ಇದೆ. ಗಾದೆಯಿಲ್ಲದ ದೇಶವಿಲ್ಲ ಎಂದು ಸಾಮಾನ್ಯವಾಗಿ ಹೇಳಲಾಗುತ್ತದೆ. ಆದರೆ ಜನಭಾಷೆಯಲ್ಲಿ ಮಾತ್ರ ಗಾದೆಯ ಅಸ್ತಿತ್ವ ಎಂಬುದನ್ನು ನೆನಪಿಡಬೇಕು. ಸಂಸ್ಕೃತದ ಪಂಡಿತಭಾಷೆಯಲ್ಲಿ ಗಾದೆಯಿಲ್ಲ. ಅಲ್ಲಿರುವ ಸುಭಾಷಿತ, ಲೋಕೋಕ್ತಿ, ನ್ಯಾಯ

ಮುಂತಾದುವುಗಳು ಗಾದೆಗಳಿಗೆ ಸಂಪೂರ್ಣ ಸಂವಾದಿಯಾಗಲಾರವು. ಗಾದೆ ಜನಭಾಷೆಯ ಕೆನೆ ಜನವಾಣಿ ಬಿಟ್ಟ ಹಣ್ಣು.

ತನ್ನ ಹ್ರಸ್ವತೆಯಿಂದಾಗಿ ಗಾದೆಯ ಜೊತೆಯಲ್ಲಿ ನಿಲ್ಲಬಲ್ಲ ಇನ್ನೊಂದು ಜನಪದ ಸಾಹಿತ್ಯ ಪ್ರಕಾರವೆಂದರೆ ಒಗಟು. ಆದರೆ ಗಾದೆಗೂ ಒಗಟಿಗೂ ಸಾದೃಶ್ಯಕ್ಕಿಂತ ವೈದೃಶ್ಯವೇ ಹೆಚ್ಚು. ಒಗಟು ಬಹುಪಾಲು ಬುದ್ಧಿಪ್ರಧಾನವಾದದ್ದು. ಗಾದೆಯಾದರೂ ಬುದ್ಧಿಭಾವಗಳ ಸಮತೋಲನವನ್ನೊಳಗೊಂಡದ್ದು. ಒಗಟಿನ ಉದ್ದೇಶ ಮೇಧಾಶಕ್ತಿ ಪರೀಕ್ಷೆ ಮತ್ತು ಮನೋರಂಜನೆ ಗಾದೆಯ ಗುರಿಯ ಹೋದರೋ ಮಾರ್ಗದರ್ಶನ, ಭೋಜನ 'ವ್ಯವಹಾರವಿದೋ' ಎಂಬ ಮಾತು ಅದಕ್ಕೆ ಅನ್ವಯ ಒಗಟು – ಕತೆ ಮತ್ತು ಗೀತೆ ಕೂಡ – ನಿರ್ದಿಷ್ಟ ಸಂದರ್ಭಗಳಲ್ಲಿ ಮಾತ್ರ ಬಳಕೆಗೊಳ್ಳುತ್ತದೆ. ಗಾದೆಯಾದರೋ ಹೊತ್ತುಗೊತ್ತಿಲ್ಲ. ಅದು ಸಾರ್ವಕಾಲಿಕ ಸರ್ವಾಂತರ್ಯಾಮಿ, ಏಕೆಂದರೆ ಅದು ಭಾಷೆಯ ಒಂದು ಅನಿವಾರ್ಯವಾದ ಒಂದು ಅಂಗ; ಸಾಹಿತ್ಯ ವಿವಕ್ಷೆಯಿಲ್ಲದ್ದು. ಗಾದೆಗಿರುವ ಸಾಂಸ್ಕೃತಿಕ ವಿಶೇಷ ಒಗಟಿಗಿಲ್ಲ. ಒಗಟು ಪ್ರಶ್ನೆಗಳ ನೋಡುತ್ತದೆ. ಗಾದೆಯಾದರೂ ಬದುಕಿನ ಪ್ರಶ್ನೆಗಳಿಗೆ ಉತ್ತರಿಸುತ್ತವೆ. ಸಮಸ್ಯೆಗಳನ್ನು ಬಿಡಿಸುತ್ತವೆ. ಗಾದೆಗಿಂತ ಒಗಟು ಹೆಚ್ಚು ಸ್ಥಳೀಯವೂ ಹೌದು. ಒಗಟುಗಳೇ ಕೆಲವೊಮ್ಮೆ ಗಾದೆಗಳೂ ಆಗುತ್ತವೆ. ಅಂಥ ನಿದರ್ಶನಗಳು ವಿರಳವಾದುದರಿಂದ, ನಿಸ್ಸಂಕೋಚವಾಗಿ ಅಂಗೋಬಾರಂಗಳನ್ನೆಲ್ಲ ಮುಟ್ಟುತ್ತವೆ. ನಾಣಿದ್ದರೂ ನಾಣ್ಣುಡಿಯಾದೀತೆ? ಜನಭಾಷೆಯ ಬಂಡು–ಬಂಡವಾಳಗಳೆಲ್ಲ, ಉಪ್ಪು ಹುಳಿ ಖಾರಗಳೆಲ್ಲ ಈ ಲೋಕೋಕ್ತಿಯಲ್ಲಿ ಮೇಳೈಸಿವೆ.

ಗಾದೆಗಳು, ಪುರಾತನ ಕಾವ್ಯಕೃತಿಗಳ ಅವಶೇಷಗಳು ಎಂಬ ಅಭಿಪ್ರಾಯವೊಂದುಂಟು. ಇದರಲ್ಲಿ ಸ್ವಲ್ಪಮಟ್ಟಿಗೆ ಹುರುಳಿರುವಂತೆ ತೋರುತ್ತದೆ. ಕೆಲವಾದರೂ ಗಾದೆಗಳು ಪದ್ಯಗಳಿಂದ ಕಳಚಿಕೊಂಡವೆಂಬುದಕ್ಕೆ ಸಮರ್ಥನೆಯಿದೆ. ನಿದರ್ಶನಕ್ಕೆ ಈ ಗಾದೆಯನ್ನು ನೋಡಿ 'ತಾಯಿ ಇದ್ದರೆ ತೌರು ಹೆಚ್ಚು, ತಂದೆ ಇದ್ದರೆ ಬಳಗ ಹೆಚ್ಚು'. ವಾಸ್ತವವಾಗಿ ಇದು ಮುಂದಿನ ತ್ರಿಪದಿಯೊಂದರ ಮೊದಲ ಪಾದ. ಇದನ್ನು ಜನಪದರಿಗೆ ಯಾರಿಂದ ತಿಳಿದಿದೆಯೋ ಗೊತ್ತಿಲ್ಲ. ಆದರೆ ನಮ್ಮೂರಿನ ಜನರಿಗೆ ಅದರಲ್ಲೂ ಹಿರಿಯ ಅತ್ತೆಯಂದಿರು ಹಾಗೂ ಸೊಸೆಯಂದಿರಿಗೆ ಈ ಗಾದೆ ತಿಳಿದಿರುವುದು ನಿಜ.

ತಾಯಿದ್ರೆ ತವರೆಚ್ಚು ತಂದಿದ್ರೆ ಬಳಗ ಹೆಚ್ಚು
ಸಾವಿರಕೆ ಹೆಚ್ಚು ಪತಿಪುರುಷ – ಹೊಟ್ಟೆಯ
ಮಾಣಿಕದ ಹರಳು ಮಗ ಹೆಚ್ಚು

ಯಾವುದೋ ಕತೆಯೊಂದರ ಹಿನ್ನೆಲೆಯಲ್ಲಿ ಗಾದೆ ಆವಿರ್ಭವಿಸುವುದಕ್ಕೂ ದೃಷ್ಟಾಂತಗಳಿವೆ.

ಯಾವುದೇ ಜನಾಂಗದ ಆತ್ಮಚರಿತ್ರೆ – ತಕ್ಕಮಟ್ಟಿಗೆ ಬಾಹ್ಯಚರಿತ್ರೆ ಕೂಡ ಅದರ ಗಾದೆಗಳಲ್ಲಿ ಗೋಚರಿಸುತ್ತದೆ. ಅವು ಜನಜೀವನದ ವಿಶ್ವಕೋಶಗಳು. ಒಂದು ಜನಪದದ ಗಾದೆಗಳನ್ನು ಕೊಡಿ, ಆ ಜನಾಂಗ ಎಂಥದೆಂದು ಹೇಳುತ್ತೇನೆ; ಎಂದು ಧೈರ್ಯವಾಗಿ ಘೋಷಿಸಬಹುದು. ಒಂದು ರಾಷ್ಟ್ರದ ಪ್ರತಿಭೆ, ಬುದ್ಧಿ ಚಮತ್ಕಾರ ಮತ್ತು ಸತ್ವಗಳನ್ನು ಅದರ ಗಾದೆಗಳಲ್ಲಿ ಕಾಣಬಹುದು ಎಂಬ ಬೇಕನ್ನನ ನುಡಿ ಸ್ಮರಣೀಯ. ಜನತೆ ಹೇಗೋ ಗಾದೆ ಹಾಗೆ ಎನ್ನುತ್ತದೆ ಒಂದು ವಿದೇಶಿ ಗಾದೆ. ಯಾವುದೇ ಜನಪದದ ಆದರ್ಶ ಅಭೀಪ್ಸೆಗಳು, ಆಚಾರ ವ್ಯವಹಾರ ರೀತಿನೀತಿಗಳು ಅದರ ಗಾದೆಗಳಲ್ಲಿ ಪ್ರಾಮಾಣಿಕವಾಗಿ ಪ್ರತಿನಿಧಿತವಾಗುತ್ತವೆ ಎಂತಲೊ ಗಾದೆಗಳ ಸಾಂಸ್ಕೃತಿಕ ಮೌಲ್ಯ ಅದ್ವಿತೀಯವಾದದ್ದು. ವಿವೇಕ, ಸಾಹಿತ್ಯ ಸಂಸ್ಕೃತಿ – ಇವು ಗಾದೆಯ ತ್ರಿಕೋನಗಳು. ಎಲ್ಲ ಶಾಸ್ತ್ರಗಳಿಗೂ ವಿಫುಲ ಸಾಮಗ್ರಿಗಳನ್ನೊದಗಿಸುವ ಅಕ್ಷಯನಾದ ಆಕರಗಳು ಗಾದೆಗಳು. ಮೊತ್ತದಲ್ಲಿ ಗಾಥಾಪುರುಷ ಸಹಸ್ರಬಾಹು ಎಂದೂ ಸಹ ಹಿರಿಯರು ಹೇಳುತ್ತಾರೆ.

ಗಾದೆಗಳ ಮೂಲಕ ಈ ಹಳ್ಳಿಗರು ಯೌವನವನ್ನೂ ಲೇವಡಿ ಮಾಡುತ್ತಾರೆ. ಈ ಗಾದೆ ನೋಡಬಹುದು. ಮೀಸೆ ಬಂದ ಹುಡುಗ ದೇಶ ಕಾಣ, ಮೊಲೆ ಬಂದ ಹುಡುಗಿ ನೆಲ ಕಾಣಳು'. ಆರಂಭ ಯೌವನದ ಗಂಡು, ಹೆಣ್ಣುಗಳ ಉನ್ಮಾದ, ಅನ್ಯಮನಸ್ಕತ, ಭ್ರಾಮಕ ಸ್ವಪ್ನ ವಿಹಾರಗಳನ್ನು ಇದಕ್ಕಿಂತ ಪರಿಣಾಮಕಾರಿಯಾಗಿ ಧ್ವನಿಸಲು ಸಾಧ್ಯವಿಲ್ಲ. ಮೀಸೆ ಬಂದ ಹುಡುಗನಿಗೆ ದೇಶವಾಗಲೀ ಅದರ ಜನತೆಯಾಗಲಿ ಇದನ್ನೊಂದು ನಿಯಮವನ್ನಾಗಿ ಹೇಳುವುದು ಸಾಧ್ಯವಿಲ್ಲ. ಗಾದೆಗಳನ್ನು ಕುರಿತು 'ಬ್ರಿಟಾನಿಕ ವಿಶ್ವಕೋಶ' ಹೇಳುವ ಈ ಮಾತುಗಳು ಗಮನಾರ್ಹ. "ಗಾದೆಗಳು ಆಡುಭಾಷೆಯ ಅಂಗಾಂಶಗಳು : ಜನ್ಮತಃ ಜನಪದ ಲಾವಣಿ, ಗೀತೆಗಳು ಹುಟ್ಟಿದಂತಹ ಜನಾಂಗಿಕ ಇತಿಹಾಸದ ಘಟಕ್ಕೆ ಸೇರತಕ್ಕವು" – ಅವು ದೈನಂದಿನ ಜೀವನದ ಘಟನೆಗಳನ್ನು ಪ್ರತಿಮೆಗಳನ್ನಾಗಿ ಸೇರತಕ್ಕವು" – ಅವು ದೈನಂದಿನ ಜೀವನದ ಘಟನೆಗಳನ್ನು ಪ್ರತಿಮೆಗಳನ್ನಾಗಿ ಬಳಸುತ್ತವೆ. ಗ್ರಾಂಥಿಕ ರೂಪದಲ್ಲಿ ಮೊದಲು ಕಾಣಿಸಿಕೊಂಡ ಕೆಲವು ಗಾದೆಗಳನ್ನು ಆಡುನುಡಿಯಿಂದಲೇ ಪಡೆದು ಬಳಸಲಾಗಿದೆ. ಒಂದು ಗಾದೆಯ ಮೂಲಕರ್ತೃ ಯಾರೆಂಬುದನ್ನು ಗುರುತಿಸುವುದು ತುಂಬಾ ಕಷ್ಟ

ಗಾದೆಗಳ ಸ್ವರೂಪ ಒಂದಾದರೂ, ಅವುಗಳ ರೂಪ ವೈವಿಧ್ಯಪೂರ್ಣ; ವಿಧಾನಗಳು ಹಲವು. ಬಹುಪಾಲು ಗಾದೆಗಳಲ್ಲಿ ನಿಯತವಾಗಿ ಎರಡು ಭಾಗಗಳಿದ್ದು, ಅವು ಸಮಪರಿಮಾಣದಲ್ಲಿರುವುದು ಗಮನಾರ್ಹ. ಅವುಗಳಲ್ಲಿ ಒಳಪ್ರಾಸವನ್ನೂ ಕಾಣಬಹುದು. ಉದಾಹರಣೆಗೆ, ಹೊಟೆಗೆ ಹಿಟ್ಟಿಲ್ಲ, ಜುಟ್ಟಿಗೆ ಮಲ್ಲಿಗೆ ಹೂವು'. ಗಾದೆ ನೆನಪಿನಲ್ಲಿ ಬೇರೂರಿ ನಿಲ್ಲುವುದಕ್ಕೂ ಈ ಬಗೆಯ ರಚನೆ ಸಹಾಯಕವೆಂಬುದು ಸ್ಪಷ್ಟ. ಈ ಸಮತೂಕ ಗಾದೆಯ ರೂಪದಲ್ಲಿ ಮಾತ್ರವಲ್ಲ, ಕರ್ತವ್ಯದಲ್ಲೂ ಕಂಡುಬರುವಂಥದು. ಗಾದೆಗಳು ಬಾಳಿನಲ್ಲಿ ಸಾಮರಸ್ಯವಿರಬೇಕೆಂಬುದನ್ನು ಒತ್ತಿ ಹೇಳುತ್ತವೆ. ಅತಿರೇಕಗಳನ್ನು ವಿಡಂಬಿಸುತ್ತವೆ ಮತ್ತು ವಿಷಮತೆಗಳನ್ನು ತಿದ್ದುತ್ತವೆ. ಒಂದೊಂದು ಗಾದೆಯೂ ಒಂದೊಂದು ಅನ್ಯೋಕ್ತಿ; ಆದ್ದರಿಂದ ಅದು ಮತ್ತಾವುದೋ ಸತ್ಯವನ್ನು ಧ್ವನಿಸುವ ಪ್ರತಿಮೆಯಾಗಿರುತ್ತದೆ. ಆದರೆ ಸಾಮಾನ್ಯವಾಗಿ ತನ್ನ ವಾಚ್ಯಾರ್ಥವನ್ನು ವಿಸರ್ಜಿಸಿಕೊಳ್ಳುವುದಿಲ್ಲ. ಸ್ವಭಾವೋಕ್ತಿಪ್ರಚುರವಾದ ಗಾದೆಗಳು ಉಂಟಾದರೂ – ನಿದರ್ಶನಕ್ಕೆ "ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು" ಗಾದೆಗಳು ವಿಶೇಷತಃ ವಕ್ರೋಕ್ತಿಭೂಯಿಷ್ಠ ಅವುಗಳಲ್ಲಿ ಲಯ ಬದ್ಧತೆಯೂ ಪ್ರಾಸಾನುಪ್ರಾಸ ಮುಂತಾದ ಶಬ್ದಾಲಂಕಾರಗಳು – ಇವು ಸ್ವಭಾವೋಕ್ತಿಯಲ್ಲಿ ಇರುತ್ತದೆ.

ಸಾಮ್ಯ ಗಂಭೀರವಾಗಿ ತಮ್ಮ ಉದ್ದೇಶವನ್ನು ನೆರವೇರಿಸಿಕೊಳ್ಳುವ ಗಾದೆಗಳು ಕೆಲವಾದರೆ, ಪ್ರಖರವಾದ ಹಾಸ್ಯ, ವಿಡಂಬನೆಗಳ ಮಾರ್ಗ ಹಿಡಿಯತಕ್ಕವು. ಉದಾಹರಣೆಗೆ ಮದುವೆಗಂಡಿಗೆ ಅದೇ ಇಲ್ಲ; ಎಂದು ಗಹಗಹಿಸುತ್ತದೆ. ಹಿರಿಯರು ಹೇಳುವ ಗಾದೆ ಯಾವುದೊಂದು ವಸ್ತುವೂ ವಿಷಯವೂ ಗಾದೆಯ ಹರವು, ಹಿಡಿತಗಳಿಗೆ ಹೊರತಾಗಿಲ್ಲ. ಬದುಕನ್ನೆಲ್ಲ ತನ್ನ ಅಕ್ಷಕುಕ್ಷಿಗಳಲ್ಲಿಟ್ಟುಕೊಂಡಿವೆ ಗಾದೆಗಳು. ಅವು ಜನಜೀವನವನ್ನು ಯಥಾವತ್ತಾಗಿ ನಿರೂಪಿಸುತ್ತವೆ, ಮಾತ್ರವಲ್ಲ ರೂಪಿಸುವ ಕೆಲಸವನ್ನೂ ಮಾಡಲೆಳಸುತ್ತವೆ. ಅವುಗಳದು ವೈದ್ಯನ ಚಿಕಿತ್ಸಕ ದೃಷ್ಟಿಯಾದುದರಿಂದ, ಶೀಲಾಶ್ಲೀಲ ಸಭಾಸಭ್ಯ ಎಂಬ ಭೇದ ಅವಕ್ಕಿಲ್ಲ; ಅವು ಅದರ ಸಮಸ್ಯೆಗಳಾಗಲಿ ಅರಿವಾಗುವುದಿಲ್ಲ. ಮೊಲೆ ಬಂದ ಹುಡುಗಿಗೆ ನೆಲವೇ ಕಾಣುವುದಿಲ್ಲ; ಸಹಜವೇ ಅವಳ ಕುಚಗಳ ಅವಳ ಕೆಳನೋಟಕ್ಕೆ ಅಡ್ಡಿಯಾಗುವಷ್ಟು ಬೆಳೆದಿವೆ. ಅವಳು ನೆಲದ ಮೇಲಿಲ್ಲ, ಗಗನದಲ್ಲೇ ತೇಲಾಡುತ್ತಿದ್ದಾಳೆ. ಆದರೆ ಅಲ್ಲಿಂದ ಒಮ್ಮೆಲೇ ಬಇದ್ದಾಗ ಆಗುವ ಪೆಟ್ಟು ಸಾಮಾನ್ಯವಲ್ಲ. ತಮ್ಮ ಕೊರತೆಯನ್ನು ಮುಚ್ಚಿಕೊಳ್ಳಲು ಅನ್ಯರ ಮೇಲೆ ತಪ್ಪು ಹೊರಿಸುವ ಪ್ರಯತ್ನವನ್ನು 'ಕುಣೀಲಾರದ ಸೂಳೆ ನೆಲ ಡೊಂಕು ಎಂದಳು' ಎಂಬ ಹಿರಿಯರು ಹೇಳಿದ ಗಾದೆ ಸೊಗಸಾಗಿ ಕನ್ನಡಿಸುತ್ತದೆ. ಭೂಮಿಯನ್ನು ದೂರುವವರು ಇನ್ನು ಯಾರನ್ನು ತಾನೇ ಟೀಕಿಸುವುದಿಲ್ಲ. ಜಿಪುಣತನವನ್ನು ಈ

ಗಾದೆ ಅನನ್ಯವಾಗಿ ಗೇಲಿ ಮಾಡುತ್ತದೆ. 'ಕೀತ್ಬೆರಳಿಗೆ ಉಚ್ಚೆ ಹುಯ್ಯಿ ಎಂದರೆ, ಜಲಮಲ ಕಟ್ಟಿ ಮೂರು ತಿಂಗಳಾಯ್ತು ಎಂದನಂತೆ', ಅಟ್ಟಕ್ಕೆ ಹಾರದವನು ಬೆಟ್ಟಕ್ಕೆ ಹಾರಿಯಾನೆ? ಎಂಬ ಗಾದೆ ಸಣ್ಣಸಣ್ಣ ವಿಷಯಗಳಿಗೆ ಮೊದಲು ಪರಿಪಕ್ವತೆ ಸಾಧಿಸಬೇಕೆಂಬುದನ್ನು ಮನದಟ್ಟು ಮಾಡುವಂತೆ ಎಂದು ಅಜ್ಜಿ ಪುಟ್ಟಕ್ಕ ಅವರು ಹೇಳುತ್ತಾರೆ. 'ಹಲ್ಲಿದ್ದೋರಿಗೆ ಕಡ್ಲೆಯಿಲ್ಲ, ಕಡ್ಲೆಯಿರೋರಿಗೆ ಹಲ್ಲಿಲ್ಲ' ಎಂಬ ಗಾದೆಯಲ್ಲಿ ಅದೃಷ್ಟದ ವೈಚಿತ್ರ್ಯದ ನಿರೂಪಣೆಯಿದೆ. ಯಾವುದೋ ಅಮುಖ್ಯ ವಿಷಯದತ್ತ ಗಮನಸೆಳೆದು, ಮುಖ್ಯವಾದುದನ್ನು ಮರೆಸುವ ಪ್ರವೃತ್ತಿಗೆ ಪ್ರತಿಬಿಂಬವಾಗಿದೆ. 'ಕೆಮ್ಮಿನಲ್ಲಿ ಹೂಸು ಮರೆಸಿದರು' ಎಂಬ ಗಾದೆ, ಇಂದು ವ್ಯಕ್ತಿಗಳಿರಲಿ, ದೇಶಗಳೇ ಈ ಕೆಲಸವನ್ನು ಮಾಡುತ್ತಿವೆ.

ಅನ್ಯ ರಾಷ್ಟ್ರಗಳ ಆಕ್ರಮಣದಿಂದ ಹುಯಿಲೆಬ್ಬಿಸಿ, ಆಂತರಿಕ ಅವ್ಯವಸ್ಥೆ, ದುರಸ್ಥಿ ಸಮಸ್ಯೆಗಳಿಂದ ಜನರ ಲಕ್ಷ್ಯ ಬೇರೆಡೆ ತಿರುಗುವಂತೆ ನೋಡಿಕೊಳ್ಳುತ್ತಿದೆ. ಮಾನ ಕೊಟ್ಟಿದು ಮನೆತನಕ, ದೇವರು ಕೊಟ್ಟುದು ಕೊನೆತನಕ' ಎಂಬ ಗಾದೆ ಲೋಕದ ಮಂದಿಯ ಉಪಕಾರದ ಪರಿಮಿತಿಯನ್ನು ಭಗವತ್ ಕರುಣೆಯ ಫಲದ ಅನಂತತೆಯನ್ನೂ ಎಷ್ಟು ಸಾರವತ್ತಾಗಿ ಪ್ರತೀತಿಗೊಳಿಸುತ್ತದೆ. ಮನೆ ಎಂಬ ಮಹೂತು ಲೌಕಿಕ, ವ್ಯವಹಾರಿಕ ಸ್ತರವನ್ನು ಸೂಚಿಸಿದರೆ, ಕೊನೆ ಎಂಬುದು ಪಾರಮಾರ್ಥಿಕ ಸ್ತರವನ್ನು ಕಡೆಗೆ ಮುಕ್ತಿಯನ್ನು ಸಂಕೇತಿಸುತ್ತದೆ. ವರದಕ್ಷಿಣೆಯ ಪಿಡುಗಿನ ಖಂಡನೆಯೂ ಇವರ ಗಾದೆಗಳಲ್ಲಿ ಬರುತ್ತವೆ. ಹತ್ತಿರದಲ್ಲಿದ್ದರೆ ಯಾವುದೇ ವಸ್ತುವಿನ ಬೆಲೆ ಗೊತ್ತಾಗುವುದಿಲ್ಲ; ಕಾಲದೇಶ ದೂರತೆ ಅದನ್ನು ಮನವರಿಕೆ ಮಾಡಿಕೊಡಬಹುದು. ಈ ಸತ್ಯ ಕರುಳಿಗೆ ದೂರವಾಗೋದಕ್ಕಿಂತ ಕಣ್ಣಿಗೆ ದೂರವಾಗೋದು ಲೇಸು ಎಂಬ ಗಾದೆಯಲ್ಲಿ ಮೂರ್ತವಾಗಿದೆ. 'ಕರುಳು' ಆಂತರ್ಯದ ಪ್ರೀತಿವಾತ್ಸಲ್ಯಗಳಿಗೆ ಸಂಕೇತ. ಕಣ್ಣು ಬಾಹ್ಯನೋಟಕ್ಕೆ ಮಾತ್ರ. ಸದಾ ಹತ್ತಿರವಿದ್ದು ಕಣ್ಣಿಗೆ ಬೀಳುತ್ತಾ ತಿರಸ್ಕಾರ ತಾತ್ಸಾರಗಳಿಗೆ ಎಡೆಕೊಡುವುದಕ್ಕಿಂತ ದೂರದಲ್ಲಿದ್ದು ವಿಶ್ವಾಸ ಪಾತ್ರರಾಗಿರುವುದೂ ಒಳಿತಲ್ಲವೇ?

ಹೀಗೆ ಕ್ಯಾತನಹಳ್ಳಿ ಗ್ರಾಮದಲ್ಲಿ ಜಾನಪದ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಗಳನ್ನು ನೀಡುತ್ತಾ ಮುಂದಿನ ಪೀಳಿಗೆಗೆ ಕೊಂಡೊಯ್ಯುತ್ತಿದ್ದಾರೆ. ಅಂದರೆ ಇವರು ಇಲ್ಲಿ ಈ ಸಾಹಿತ್ಯಕ್ಕೆ ಯಾವುದೇ ರೀತಿಯ ಸಂಗ್ರಹಗಳನ್ನಾಗಲೀ, ಗ್ರಂಥಸ್ವರೂಪದಲ್ಲಗಲೀ ನೀಡಿರದೇ ಇರಬಹುದು. ಜೊತೆಗೆ ಇಂತಹ ಗಆದೆಗಳು, ಒಗಟುಗಳು, ಗೀತೆಗಳು, ಲಾವಣಿಗಳು ಅಂದರೆ ಲಾವಣಿಗಳು ಜನಪದ ಗೀತೆಯ ಒಂದು ಉಪವಿಭಾಗವಾಗಿದೆ. ಕಥನಗೀತೆಯೊಂದನ್ನು ಹೇಳುವಂಥದ್ದು. ಮೌಖಿಕ

ಪರಂಪರೆಯಲ್ಲಿ ಪರಂಪರಾಗತವಾಗಿ ಸಾಗಿ ಬಂದ ಹಾಡಿನಲ್ಲಿ ನಿರೂಪಿಸಲಾದ ಕಥೆಯೇ 'ಲಾವಣಿ'ಗಳು. ಇವುಗಳು ರೂಪ ಮತ್ತು ವಿಷಯಗಳೆರಡರಲ್ಲೂ ಜನಪದ ಮಾದರಿಯದು. ಇಲ್ಲಿ ಕ್ರಿಯೆಯೇ ಪ್ರಧಾನವಾಗಿರುತ್ತದೆ. ಪಾತ್ರ ಮತ್ತು ಕ್ರಿಯೆಗಳ ಪೈಕಿ ಕ್ರಿಯೆಯ ಮೇಲೆ ಕೇಂದ್ರೀಕೃತವಾದುದಾಗಿರುತ್ತದೆ. ತೀರಾ ನಾಟಕೀಯ ಸ್ವಭಾವದ್ದಾಗಿದ್ದು, ವೈವಿಧ್ಯತೆಯನ್ನು ಕಳೆದುಕೊಳ್ಳುವ ಏಕರೂಪತೆಯಿಂದ ಕೂಡಿರುತ್ತದೆ. ಇವು ಪಲ್ಲವಿಯಿಂದ ಕೂಡಿರುವಂತಹವು. ಇವುಗಳ ಬಗೆಗೆ ಇಲ್ಲಿನ ನಾಗರಿಕರಿಗೆ ಹೆಚ್ಚಿನ ಜ್ಞಾನವಿದೆ. ಜೊತೆಗೆ ಪುರಾಣಗಳು ಐತಿಹ್ಯಗಳ ಬಗೆಗೂ ಇವರು ಹೇಳುತ್ತಾರೆ.

ಆರಾಧನೆಗಳ, ಆಚರಣೆಗಳ ಫಲವಾಗಿ ಪುರಾಣಗಳು ಹುಟ್ಟಿಕೊಂಡಿವೆ ಎಂದು ಹೇಳುತ್ತಾರೆ. ನೈಸರ್ಗಿಕ ವೈಚಿತ್ರ್ಯಗಳ ಊಹಾತ್ಮಕ ಸಾಂಕೇತಿಕರಣವೇ ಪುರಾಣ. ಇದರಲ್ಲಿ ಸೃಷ್ಟಿ ಪುರಾಣಗಳು, ಜಲಪುರಾಣಗಳು, ಅಗ್ನಿಪುರಾಣಗಳು, ಆಕಾಶಪುರಾಣಗಳು, ಜನಾಂಗ ಪುರಾಣಗಳು ಎಂದು ವಿಭಾಗಿಸಿಕೊಂಡು ಆಯಾ ವಿಭಾಗಕ್ಕೆ ಸಂಬಂಧಿಸಿದಂತೆ ಪುರಾಣಗಳನ್ನೂ ಹೇಳುತ್ತಾರೆ. ಐತಿಹ್ಯಗಳೆಂದರೆ ಒಂದು ಸಂಗತಿಯನ್ನು ವಿವರಿಸುತ್ತಾ ಅದಕ್ಕೆ ಸಮರ್ಥನೆಯಾಗಿ ಸಾಕ್ಷಿ ತೋರಿಸುವುದೂ ಐತಿಹ್ಯ. ಇಲ್ಲಿ ಜನಪದರು, ಕ್ಷೇತ್ರಕಾರ್ಯದಲ್ಲಿದ್ದಾಗ ಜಾನಪದ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಹಲವಾರು ಕರಕುಶಲ ಸಾಮಗ್ರಿಗಳನ್ನು ತೋರಿಸುದುದು ಎನ್ನಬಹುದು. ಇದರಲ್ಲಿ ಜಗತ್ತಿನ ಮೂಲ ಕುರಿತಾದ ಐತಿಹ್ಯಗಳು, ಅತಿಮಾನುಷ ವ್ಯಕ್ತಿಗಳನ್ನು ಕುರಿತಾದ ಐತಿಹ್ಯಗಳು, ಐತಿಹಾಸಿಕ ಐತಿಹ್ಯಗಳು, ಸ್ಥಳೀಯ ಐತಿಹ್ಯಗಳು, ಪ್ರವಾಸೀ ಐತಿಹ್ಯಗಳೆಂದು ವಿಭಾಗಿಸಬಹುದು. ಇಲ್ಲಿ ಶಿವಣ್ಣ ಎನ್ನುವ ವ್ಯಕ್ತಿಯು ಮಹದೇಶ್ವರ ದೇವರು ಹೇಗೆ ಹುಟ್ಟಿದನೆಂಬ ಕಥೆಯನ್ನು ಹೇಳಿರುವುದನ್ನು 'ಜನಪದ ಕಥೆ'ಯಲ್ಲಿ ನಮೂದಿಸಲಾಗಿದೆ.

ಇನ್ನು ಗ್ರಂಥಸ್ಥ ರೂಪದ ಅಥವಾ ಶಿಷ್ಟಸಾಹಿತ್ಯದ ಬಗೆಗೆ ನೋಡಿದಾಗ ಇವೆರಡೂ ಪರಸ್ಪರ ವಿರುದ್ಧವೆನಿಸಿದರೂ ಕೂಡ ಇವು ನಮಗೆ ತಿಳಿಯದ ರೀತಿಯಲ್ಲಿ ಒಂದಕ್ಕೊಂದು ಪೂರಕವಾಗಿಯೇ ಇರುತ್ತವೆ. ಹಳ್ಳಿ ಎಂದಮೇಲೆ ಅಲ್ಲಿ ಶ್ರೀಮಂತಿಕೆಯ ಜಾನಪದ ಸಾಹಿತ್ಯ ಸಿಗುತ್ತದೆ. ಆದರೆ ಶಿಷ್ಟಸಾಹಿತ್ಯವು ಅಷ್ಟು ಸುಲಭವಾಗಿ ಸಿಗುವಂತದಲ್ಲ. ಅದಕ್ಕೆ ಹಿಂದಿನಿಂದಲೂ ಬರಹಗಾರರು, ಲೇಖಕರು, ಕವಿಗಳಿಂದ ರಚನೆಯಾಗಲ್ಪಡುವಂತದ್ದು. ಹಿಂದೆ ಪಂಪ, ತನ್ನ, ಜನ್ನ ಕವಿಗಳಿಂದ ರಚನೆಯಾಗಲ್ಪಡುವಂತದ್ದು. ಹಿಂದೆ ಪಂಪ, ರನ್ನ, ಜನ್ನ ಕುಮಾರವ್ಯಾಸರಂತಹ ಪ್ರಮುಖ ಕವಿಗಳು ಮಹಾಕಾವ್ಯಗಳನ್ನು ರಚಿಸಿದ್ದಾರೆ ಎಂಬುದು, ಅವರ ಕಾವ್ಯಗಳು ನಮಗೆ ದೊರಕಿರುವುದರಿಂದ, ಅದು ಸತ್ಯವೆಂದು ತಿಳಿಯುತ್ತದೆ. ಅವರು

ಬರೆಯದೂ ಕೇವಲ ಮೌಖಿಕವಾಗಿ ಹೇಳಿದಿದ್ದರೆ ರಾಮಾಯಣ, ಮಹಾಭಾರತಗಳಂತಹ ಮಹಾಕಾವ್ಯಗಳು ಕೇವಲ ಜನಪದ ಕಥೆಗಳಾಗಿ ಇರುತ್ತಿದ್ದವು ಎನ್ನಬಹುದು. ಅವರು ದಾಖಲಿಸಿದುದರಿಂದಲೇ ಇಂದು ನಮ್ಮ ಕನ್ನಡ ಸಾಹಿತ್ಯವು ಶ್ರೀಮಂತಿಕೆಯಿಂದ ಕೂಡಿದೆ ಎನ್ನಬಹುದು. ರಸಋಷಿ ಕುವೆಂಪು ಅವರಂತಹ ಮಹಾನ್ ಕವಿಗಳಿಗೆ ಸ್ಫೂರ್ತಿಯಾಗಲೂ ಕಾವ್ಯಗಳೇ ಇರುತ್ತಿರಲಿಲ್ಲ. ಅದು ಅವರ ದಾಖಲಿಸುವಿಕೆಯಿಂದ ಸಾಧ್ಯವಾಗಿದೆ.

ಇನ್ನು ಶಿಷ್ಟ ಸಾಹಿತ್ಯಕ್ಕೆ ಬಂದರೆ ನಮ್ಮೂರು ತನ್ನ ಮಗ್ಗುಲಲ್ಲೇ ಪ್ರಖ್ಯಾತ ಲೇಖಕ, ಕಥೆಗಾರರಾದ 'ಆಲನಹಳ್ಳಿ ಕೃಷ್ಣ' ಅವರ ಹುಟ್ಟೂರು ಆಲನಹಳ್ಳಿಯನ್ನು ಇಟ್ಟುಕೊಂಡಂತಹ ಹಳ್ಳಿ, ಆದುದರಿಂದಲೋ ಏನೋ ಇಲ್ಲಿಯೂ ಕೂಡ ಅನೇಕ ಬರಹಗಾರರು, ಕಥೆಗಾರರು, ನಾಟಕಕಾರರು ಹುಟ್ಟಿ ಬೆಳೆದರು. ಆದರೆ ಅವರಲ್ಲಿ ಮುಖ್ಯವಾಗಿ, ಪ್ರಮುಖವಾಗಿ ಕಂಡುಬರುವ ಕೇವಲ ಒಬ್ಬರು ಲೇಖಕರೆಂದರೆ ಅದು 'ಕ್ಯಾತನಹಳ್ಳಿ ಬಸವರಾಜು' ಎಂಬ ಹೆಸರು ಮಾತ್ರ. ತಂದೆ ಶ್ರೀ ಕೆ.ನೀಲೇಗೌಡ, ತಾಯಿ ಶ್ರೀಮತಿ ಬಸಮ್ಮ.

ಶ್ರೀ ಬಸವರಾಜು ಅವರು ಕನ್ನಡ ಸಾಹಿತ್ಯ, ತೆಲುಗು ಸಾಹಿತ್ಯ ಹೀಗೆ ಎರಡರ ಅಧ್ಯಯನ ಮಾಡಿದ್ದಾರೆ. ಕನ್ನಡದಲ್ಲಿ ಹಲವು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಕತೆ, ಕಾದಂಬರಿ, ಕವಿತೆಯ ಕ್ಷೇತ್ರದಲ್ಲಿ ತಮ್ಮ ಕೊಡುಗೆಯನ್ನು ನೀಡಿದ್ದಾರೆ. ವಿದ್ಯೆ-ವಿನಯಗಳ ಸಂಗಮ ಇವರ ಜೀವನ. ಬದುಕಿನ ಬುಟ್ಟಿಯಲ್ಲಿ ಸಾಹಿತ್ಯ ಸೌರಭ ಸೂಸುವ ಹೂಗಳನ್ನೇ ತುಂಬಿಕೊಂಡಿದ್ದಾರೆ. ಓದು-ಬರಹ-ಸಾಹಿತ್ಯ ಕೆಲಸಗಳಿಗೆ ತನು-ಮನ-ಧನ ತ್ರಿಕಕರಣ ಪೂರ್ಣ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ. ಆದರ್ಶ ಜೀವನವೇ ಅವರ ಆಸೆ. ಆದರ್ಶಕ್ಕಾಗಿ ಅವರು ಮನಸೋ ಇಚ್ಛೆ ದುಡಿಯುತ್ತಾರೆ. ಬರಹದ ಬಹುವಿಧಗಳಲ್ಲಿ ಹೆಜ್ಜೆಗಳನ್ನು ಇಟ್ಟಿರುವ ಅವರು ಕ್ಯಾತನಹಳ್ಳಿಗೆ ಕೀರ್ತಿ ತಂದಿದ್ದಾರೆ ಎನ್ನಬಹುದು.

ಇವರು ಅನೇಕ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಕೆಲವು ಮುಖ್ಯವಾದವುಗಳೆಂದರೆ

೧) ಪುರಂದರದಾಸರು (ಜೀವನಚಿತ್ರ)

೨) ಮತ್ತಿತಾಳಯ್ಯನ ಹಳ್ಳಿಯ ಮಂದಿ (ಕಾದಂಬರಿ)

೩) ಜನಪ್ರಿಯ ಕನ್ನಡ ವ್ಯಾಕರಣ

೪) ದಾರಿ (ಕವನ ಸಂಕಲನ)

೫) ಅಮೃತೋತ್ಸವ (ಸಂಪಾದಿತ)

೬) ಪಂಚಲಿಂಗ (ಸಂಪಾದಿತ)

೭) ನಿಗೂಢ (ಕಥಾ ಸಂಕಲನ)

೮) ಪಿತೂರಿ (ಸಾಮಾಜಿಕ ನಾಟಕ)

೯) ಕನಕದಾಸರು (ಜೀವನ ಚಿತ್ರ)

೧೦) ನಾಕಂಡ ಆಂಧ್ರಪ್ರದೇಶ (ಶೈಕ್ಷಣಿಕ ಪ್ರವಾಸ ಕಥನ)

ಹೀಗೆ ಕ್ಯಾತನಹಳ್ಳಿಯು ತನ್ನದೇ ಆದ ಸಾಹಿತ್ಯ ಹೊಂದಿದ್ದು ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆಗಳನ್ನು ನೀಡಿರುವುದನ್ನು ಗಮನಿಸಬಹುದಾಗಿದೆ.

## ಅಧ್ಯಾಯ - ೫

# ವ್ಯವಸಾಯ ಪದ್ಧತಿ, ಪ್ರಮುಖ ಬೆಳೆಗಳು ಮತ್ತು ಮಾರುಕಟ್ಟೆ

ಭಾರತದೇಶವು ಹಳ್ಳಿಗಳಿಂದ ಕೂಡಿರುವ ಒಂದು ಅಭಿವೃದ್ಧಿಶೀಲ ರಾಷ್ಟ್ರವಾಗಿದೆ. ಆದುದರಿಂದಲೇ ಇಲ್ಲಿನ ಹಳ್ಳಿಗಳ ಜನರ ಮುಖ್ಯ ಕಸುಬು ವ್ಯವಸಾಯವೇ. ಸುಮಾರು ಶೇ. ೬೦ಕ್ಕಿಂತಲೂ ಹೆಚ್ಚು ಜನರು ವ್ಯವಸಾಯವನ್ನು ನಂಬಿದ್ದಾರೆ. ದೇಶದ ಆರ್ಥಿಕ ಅಭಿವೃದ್ಧಿಯಲ್ಲಿ ಕೃಷಿಯ ಪಾಲು ಕಡಿಮೆಯಾಗುತ್ತಿದ್ದರೂ ಕೃಷಿ ಇಳುವರಿ ಹೆಚ್ಚುತ್ತಲೇ ಇದೆ. ಭಾರತದೇಶದಲ್ಲಿ ವ್ಯವಸಾಯಕ್ಕೆ ಉತ್ತಮ ವಾಯುಗುಣ, ಫಲವತ್ತಾದ ಭೂಮಿ, ನೀರಾವರಿ, ಮಾನವ ಸಂಪನ್ಮೂಲ, ನೈಸರ್ಗಿಕ ಸಂಪನ್ಮೂಲ ಯಥೇಚ್ಛವಾಗಿದೆ. ತಲೆತಲಾಂತರದಿಂದ ವ್ಯವಸಾಯವನ್ನೇ ನೆಚ್ಚಿಕೊಂಡು ಜನರು ದುಡಿಯುತ್ತಿದ್ದಾರೆ.

ಅದರಂತೆಯೇ ಈ ಗ್ರಾಮದಲ್ಲಿಯೂ ಹಲವಾರು ವ್ಯವಸಾಯ ಪದ್ಧತಿಗಳು ಅನೇಕ ಆಹಾರಬೆಳೆಗಳನ್ನು, ವಾಣಿಜ್ಯ ಬೆಳೆಗಳನ್ನೂ ಬೆಳೆಯುತ್ತಾರೆ. ಇಲ್ಲಿ ಉತ್ತಮ ಮಾರುಕಟ್ಟೆಯ ವ್ಯವಸ್ಥೆಯೂ ಇರುವುದು ಈ ಭಾಗದ ರೈತರಿಗೆ ಉತ್ತಮ ಉತ್ತೇಜನವು ಸಿಗುತ್ತಿದೆ.

ಕ್ಯಾತನಹಳ್ಳಿಯಲ್ಲಿ ವ್ಯವಸಾಯವನ್ನು ನಂಬಿರುವುದು ಹೆಚ್ಚು ಇಲ್ಲಿಯೂ ಸಹ ಅನೇಕ ರಈತಿಯ ವ್ಯವಸಾಯ ಪದ್ಧತಿಗಳನ್ನು ಕಾಣಬಹುದು, ಇಲ್ಲಿ ಹೆಚ್ಚು ಮಳೆ ಆಶ್ರಯ ವ್ಯವಸಾಯವೇ ಹೆಚ್ಚು. ಇಲ್ಲಿ ಸ್ವಲ್ಪ ಪ್ರಮಾಣದಲ್ಲಿ ಕೆರೆ ನೀರಾವರಿ, ಬಾವಿ ನೀರಾವರಿ, ಏತ ನೀರಾವರಿಯೂ ಕಂಡುಬರುತ್ತದೆ. ನಮ್ಮೂರಿನಿಂದ ಕೇವಲ ೩೦ ಕಿ.ಮೀ. ದೂರದಲ್ಲಿ ಕಬಿನಿ ಜಲಾಶಯ ಇದ್ದರೂ ಕೂಡ ನಮ್ಮೂರಿಗೆ ಆ ಜಲಾಶಯದಿಂದ ಏನೂ ಪ್ರಯೋಜನವಾಗುತ್ತಿಲ್ಲ. ಇಲ್ಲಿ ಮಿಶ್ರ ವ್ಯವಸಾಯ ಪದ್ಧತಿಯೂ ಉಂಟು, ವ್ಯವಸಾಯದ ಜೊತೆಜೊತೆಗೆ ಹೈನುಗಾರಿಕೆ, ಕೋಳಿ ಸಾಕಾಣೆ, ಮುಂತಾದ ಉಪಕಸಬುಗಳನ್ನೂ ಮಾಡುತ್ತಾರೆ. ವ್ಯವಸಾಯವನ್ನು ಸಾಂಪ್ರದಾಯಿಕ-ವಾಗಿಯೂ ಮಾಡುತ್ತಾರೆ. ಜೊತೆಗೆ ಆಧುನಿಕ ಪದ್ಧತಿಯಿಂದಲೂ ಮಾಡುತ್ತಾರೆ. ಬಹುತೇಕರು ನೇಗಿಲನ್ನು ಬಳಸಿದರೆ, ಹಣವಂತರು ಟ್ರಾಕ್ಟರ್, ಟಿಪ್ಪರ್‌ಗಳನ್ನು ಬಳಸುತ್ತಾರೆ. ಮನೆ ಮಂದಿ ಎಲ್ಲರೂ ಒಟ್ಟಾಗಿ ಕೆಲಸದಲ್ಲಿ ತೊಡಗುತ್ತಾರೆ. ಉದಾಹರಣೆಗೆ ರಾಗಿ ನಾಟಿ ಮಾಡುವಾಗ, ಹತ್ತಿ ಬಿಡಿಸುವಾಗ, ಕುಯಿಲು ಮಾಡುವಾಗ, ಹೀಗೆ ಎಲ್ಲಾ ಕೆಲಸಗಳಲ್ಲಿಯೂ ಎಲ್ಲರೂ ಒಟ್ಟಾಗಿ ಕೆಲಸ ಮಾಡುತ್ತಾರೆ, ನಮ್ಮೂರಲ್ಲಿ ಅವಿಭಕ್ತ ಕುಟುಂಬಗಳು ಹೆಚ್ಚಾಗಿರುವುದರಿಂದಲೇ ಇಡೀ ಕುಟುಂಬವೇ

ಒಂದುಗೂಡಿ ಬೇಸಾಯ ಮಾಡುತ್ತದೆ. ಇದು ಒಂದು ನನಗೆ ತುಂಬಾ ಖುಷಿ ಕೊಟ್ಟಂತ ವಿಷಯ. ನಾನೂ ಸಹ ಹತ್ತಿ ಬೀಜ ಹಾಕಿದ್ದೇನೆ, ನಾಟಿ ಮಾಡಿದ್ದೇನೆ. ತುಂಬಾ ಇಷ್ಟವಾಗುತ್ತದೆ.

ಕ್ಯಾತನಹಳ್ಳಿಯು ಹೆಚ್ಚಾಗಿ ಮಳೆ ಆಶ್ರಯಿತ ಭೂ ಭಾಗಹೊಂದಿದ್ದು ಇಲ್ಲಿ ಪ್ರಮುಖವಾಗಿ ರಾಗಿ, ಹತ್ತಿ, ಭತ್ತ, ತೊಗರಿ, ಅವರೆ, ಹುರಳಿ ಮಾವು, ಹುಣಸೆ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಜೊತೆಗೆ ಇತ್ತೀಚೆಗೆ ಹಣ್ಣು ತರಕಾರಿಗಳು, ಅಲ್ಲೊಬ್ಬ ಇಲ್ಲೊಬ್ಬರು ತಂಬಾಕನ್ನೂ ಬೆಳೆಯುತ್ತಿದ್ದಾರೆ. ಆದರೆ ಇಲ್ಲಿನ ಅತಿಪ್ರಮುಖ ಬೆಳೆ ಎಂದರೆ ಆಹಾರ ಬೆಳೆಯಾಗಿ ರಾಗಿ, ವಾಣಿಜ್ಯ ಬೆಳೆಯಾಗಿ ಹತ್ತಿಯನ್ನು ಬೆಳೆಯುತ್ತಾರೆ. ಹಾಗೆಯೇ ತೆಂಗನ್ನೂ ಬೆಳೆಯುತ್ತಾರೆ. ಇಲ್ಲಿ ರಾಗಿಯನ್ನು ಆಹಾರ ಬೆಳೆಯಾಗಿ ಯಥೇಚ್ಛವಾಗಿ ಬೆಳೆಯುತ್ತಾರೆ, ರಾಗಿಯೇ ಮುಖ್ಯ ಆಹಾರ ಬೆಳೆಯಾಗಿದೆ. ಹತ್ತಿಯನ್ನು ಪ್ರಮುಖವಾಗಿ ವ್ಯಾಪಾರದ ಉದ್ದೇಶಕ್ಕೂ ಬೆಳೆಯುತ್ತಾರೆ. ಮುಖ್ಯವಾಗಿ ಬಿ.ಟಿ. ಹತ್ತಿ ಮತ್ತು ನಾಡಹತ್ತಿ ಎಂಬ ಎರಡು ತಳಿಗಳನ್ನು ಬೆಳೆಯುತ್ತಾರೆ.

ಕ್ಯಾತನಹಳ್ಳಿಗೆ ಪ್ರಮುಖವಾಗಿ ಮಾರುಕಟ್ಟೆಯನ್ನು ಒದಗಿಸಿರುವುದು ಮೈಸೂರು, ಕ್ಯಾತನಹಳ್ಳಿಗೆ ಹೆಗ್ಗಡದೇವನಕೋಟೆ ಅಥವಾ ಪಕ್ಕದ ಹುಣಸೂರುಗಳು ಹತ್ತಿರವಿದ್ದರೂ ಮೈಸೂರಿನಲ್ಲಿಯೇ ಮಾರುಕಟ್ಟೆಯನ್ನು ಅವಲಂಬಿಸಿದೆ. ರೈತರು ತಾವು ಬೆಳೆದ ಬೆಳೆಗಳನ್ನು ಮೈಸೂರಿನ ಆರ್.ಎಂ.ಸಿ.ಗೆ ಹೂಡುತ್ತಾರೆ. ಆದರೆ ಅನೇಕರು ತಾವು ತಂದ ಬೆಳೆಗಳನ್ನು ರಸ್ತೆ ಬದಿಯಲ್ಲಿ ಹರಾಜಿನ ಮೂಲಕ ಮಾರುತ್ತಾರೆ. ನಮ್ಮೂರಿಗೆ ಮೈಸೂರು ನಗರದಿಂದ ತಂಗಲು ಬಂದು ಸರ್ಕಾರಿ ಬಸ್ಸು ಬರುತ್ತದೆ. ಅದು ಮುಂಜಾನೆ ೧೫ ಗಂಟೆಗೆ ಹೊರಡುತ್ತದೆ. ಅನೇಕ ಸಣ್ಣಪುಟ್ಟ ರೈತರಿಗೆ ತಾವು ಬೆಳೆದ ಪದಾರ್ಥಗಳನ್ನು ನಗರಕ್ಕೆ ಸಾಗಿಸಲು ಅದೇ ವಾಹನ ಉಪಯೋಗಕ್ಕೆ ಬರುತ್ತದೆ. ಮೈಸೂರು ಮಾರುಕಟ್ಟೆ ಒಂದು ವಿಶಾಲವಾದ ಮಾರುಕಟ್ಟೆ, ಇದು ಸುತ್ತಮುತ್ತಲಿನ ನೂರಾರು ಹಳ್ಳಿಗಳಿಗೆ ಮಾರುಕಟ್ಟೆ ಒದಗಿಸುತ್ತದೆ. ಕೆಲವೊಮ್ಮೆ ನಮ್ಮೂರೇ ಮಾರುಕಟ್ಟೆಯನ್ನು ಒದಗಿಸುತ್ತದೆ, ಕ್ಯಾತನಹಳ್ಳಿ ತುಂಬಾ ವಿಶಾಲವಾದ ಊರು ಹೆಚ್ಚು ಜನಸಂಖ್ಯೆ ಹೊಂದಿರುವ ಊರಾದ್ದರಿಂದ ಇಲ್ಲಿನ ಜನರ ಬೇಡಿಕೆ ಪೂರೈಕೆ ಬಹುಮುಖ್ಯ ತಮಗೆ ಅವಶ್ಯಕತೆ ಇರುವ ವಸ್ತುಗಳನ್ನು ಇನ್ನೊಬ್ಬ ರೈತನ ಬಳಿ ಖರೀದಿಸುತ್ತಾರೆ. ಅಂದರೆ ರೈತ ತಾನು ಬೆಳೆದ ಆಹಾರ ಬೆಳೆಗಳನ್ನು ಕಷ್ಟಪಟ್ಟು, ದಲ್ಲಾಳಿಗಳ ಕಿರುಕುಳದ ಜೊತೆಗೆ ಕಡಿಮೆ ಲಾಭದಲ್ಲಿ ಮಾರುವ ಬದಲು ಊರಿನಲ್ಲೇ ಇತರರಿಗೆ ಮಾರುತ್ತಾನೆ. ಇದರಿಂದ ಮಾರುವವನಿಗೂ ಲಾಭ ಕೊಳ್ಳುವವರಿಗೂ ಲಾಭ, ಹತ್ತಿ, ರಾಗಿ, ಬೇಳೆ ಕಾಳುಗಳು, ಮೆಣಸಿನ ಹಣ್ಣು, ಹುಣಸೆ ಹಣ್ಣು, ಮಾವು

ಹೀಗೆ ಅನೇಕ ಬೆಳೆಗಳನ್ನು ಕೊಳ್ಳುವವರು ಇಲ್ಲಿಗೇ ಬಂದು ಕೊಂಡುಕೊಳ್ಳುತ್ತಾರೆ. ಕ್ಯಾತನಹಳ್ಳಿ ಗ್ರಾಮ ಪಂಚಾಯ್ತಿಗೆ ಸೇರುವ ಅನೇಕ ಹಳ್ಳಿಗಳಿಂದಲೂ ಜನರು ವ್ಯಾಪಾರಕ್ಕಾಗಿ ಇಲ್ಲಿಗೆ ಬರುತ್ತಾರೆ. ಹರಾಜಿನ ಮೂಲಕ ಇಲ್ಲಿ ವ್ಯಾಪಾರ ವಹಿವಾಟು ನಡೆಯುತ್ತದೆ. ಸುತ್ತಲಿನ ಊರುಗಳಿಗೆ ಕ್ಯಾತನಹಳ್ಳಿ ಒಂದು ಮಾರುಕಟ್ಟೆ ಸ್ಥಳವಾಗಿದೆ.

ಇಲ್ಲಿನವರ ಆಹಾರ ಪದ್ಧತಿಯು ವಿಶೇಷವಾಗಿದೆ. ಇಲ್ಲಿ ಶಾಖಾಹಾರ ಮತ್ತು ಮಾಂಸಾಹಾರ ಮಾಡುವ ಜನರಿದ್ದಾರೆ. ಶಾಖಾಹಾರಿಗಳು ಲಿಂಗಾಯತರು ಹಾಗೂ ಬ್ರಾಹ್ಮಣರನ್ನು ಬಿಟ್ಟರೆ ಮಿಕ್ಕವರು ಮಾಂಸಾಹಾರಿಗಳೇ ಆದರೆ ಮಾಂಸಾಹಾರ ಮಾಡದ ವರ್ಗದವರು ಕದ್ದು ಮುಚ್ಚಿ ತಿನ್ನುವುದೂ ಉಂಟು. ಕ್ಯಾತನಹಳ್ಳಿಯಲ್ಲಿ ಬಹುತೇಕ ಮನೆಗಳಲ್ಲಿ ನಗರದ ಜನರಂತೆ ಬೆಳಿಗ್ಗೆಯ ಊಟಕ್ಕೆ ತರಾವರಿ ತಿಂಡಿ ತಿನಿಸುಗಳನ್ನು ಮಾಡುವುದಿಲ್ಲ. ಅವರಿಗೆ ರಾಗಿ ಮುದ್ದೆ, ಮೊಸಪ್ಪಿನ ಸಾರೇ ಬೇಕು. ಆದರೆ ಇತ್ತೀಚಿನ ಆಧುನೀಕತೆಯಿಂದ ಜಾಗತೀಕರಣದಿಂದ ನಮ್ಮ ಊರು ಸಹ ಹೊರತಾಗಿಲ್ಲ. ಬದಲಾವಣೆ ಗಾಳಿ ಬೀಸಿದಂತೆ ಬದಲಾವಣೆಗೆ ಒಳಗಾಗುತ್ತಿದೆ. ಇಲ್ಲಿ ಹಲವಾರು ಜನಾಂಗದವರು ಇರುವುದರಿಂದ ಇಲ್ಲಿ ಕೆಲವು ಮಾಂಸಾಹಾರಿಗಳು ಎಲ್ಲಾ ಪ್ರಾಣಿಗಳನ್ನೂ ತಿನ್ನುವ ಅಭ್ಯಾಸ ಮಾಡಿಕೊಂಡಿದ್ದಾರೆ. ಜನರ ಜೀವನ ಆಹಾರ ಪದ್ಧತಿಯು ವಿಶೇಷವಾಗಿ ಕಂಡುಬರುತ್ತದೆ.

**ಆಧುನಿಕ ಪರಿವರ್ತನೆಯ ಹಾದಿಯಲ್ಲಿ ಕ್ಯಾತನಹಳ್ಳಿ**

ಮಾನವನ ಜೀವನದಲ್ಲಿ ನಾಗರಿಕ ಪರಿವರ್ತನೆಯಾದಂತೆ ಜೊತೆಗೆ ಆಧುನಿಕ ಬೆಳವಣಿಗೆಯಾದಂತೆ ಆತನ ಜೀವನ ವಿಧಾನಗಳೂ ಸಹ ಬದಲಾವಣೆಯನ್ನು ಪಡೆದವು. ಯಾವುದೇ ಜನ ಸಂಪರ್ಕ ಹೆಚ್ಚಾದಂತೆ ಮತ್ತು ಆಧುನಿಕತೆಯು ಬೆಳೆದಂತೆ ಅಲ್ಲಿನ ರೀತಿನೀತಿಗಳು, ನಂಬಿಕೆಗಳು, ಆಚರಣೆಗಳು ಹೊಸತನವನ್ನು ಪಡೆದುಕೊಂಡವು. ಕೆಲವನ್ನು ಆಚರಿಸಿದರೆ ಮತ್ತೆ ಕೆಲವನ್ನು ಬಿಟ್ಟು ಕೆಲವುಗಳಿಗೆ ಹೊಸ ಮೆರುಗನ್ನು ನೀಡಿ ಆಚರಿಸಲ್ಪಡುತ್ತಿವೆ. ಸಾರಿಗೆ ವ್ಯವಸ್ಥೆ ಅಭಿವೃದ್ಧಿಯ ಪಥವನ್ನು ಹೊಂದಿದ ನಂತರ ಅಲ್ಲಿ ಅಭಿವೃದ್ಧಿಯ ಕಾರ್ಯಗಳು ಜರುಗತೊಡಗಿದವು.

ಕ್ಯಾತನಹಳ್ಳಿಯು ಒಂದು ಅಭಿವೃದ್ಧಿಶೀಲ ಊರೆಂದು ಕರೆಸಿಕೊಳ್ಳುತ್ತಿದೆ. ಅಂದರೆ ಈಗ ಅಭಿವೃದ್ಧಿ ಹೊಂದುತ್ತಿರುವ ಹಳ್ಳಿ ಎಂದು ಗುರುತಿಸಿಕೊಳ್ಳುತ್ತಿದೆ. ಮುಖ್ಯವಾಗಿ ಈ ಬದಲಾವಣೆ ಅಭಿವೃದ್ಧಿಗೆ ಮುಖ್ಯವಾಗಿ ಕಾರಣವಾದ ಅಂಶಗಳೆಂದರೆ

೧) ಶೈಕ್ಷಣಿಕವಾಗಿ ಅಭಿವೃದ್ಧಿ

೨) ಗ್ರಾಮೋದ್ಯೋಗ- ಕೌಶಲ ಹೊಂದಿರುವ ಮಹಿಳೆಯರು ಮತ್ತು ಪುರುಷರು

ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆ ತಾಲ್ಲೂಕಿನ ಕ್ಯಾತನಹಳ್ಳಿಯು ಹಿಂದುಳಿದ ತಾಲ್ಲೂಕು ಎಂಬ ಹಣೆ ಪಟ್ಟಿ ಕಟ್ಟಿಕೊಂಡ ತಾಲ್ಲೂಕಿನ ಒಂದು ಪ್ರದೇಶವಾಗಿದೆ. ಹಿಂದೆ ಕ್ಯಾತನಹಳ್ಳಿಯೂ ಸಹ ತುಂಬಾ ಹಿಂದುಳಿದ ಹಳ್ಳಿ, ತುಂಬಾ ಬಡಜನರಿಂದ ಕೂಡಿದಂತಹ ಹಳ್ಳಿಯಾಗಿತ್ತು. ತುತ್ತು ಊಟಕ್ಕೂ ಪರದಾಡುವಂತಹ ಸನ್ನಿವೇಶ ಇತ್ತೆಂದು ನಮ್ಮ ಹಿರಿಯರು ನೆನಪಿಸಿಕೊಳ್ಳುತ್ತಾರೆ. ಇಲ್ಲಿ ಮೊದಲು ಸರಿಯಾದ ರಸ್ತೆ ವ್ಯವಸ್ಥೆ ಇರಲಿಲ್ಲವಂತೆ, ಊರಿಗೆ ಕಾಡುದಾರಿ ಹಿಡಿದು ಬರಬೇಕಿತ್ತಂತೆ, ವಿದ್ಯುತ್, ಕುಡಿಯುವ ನೀರಿನ ಪೂರೈಕೆಯಂತೂ ಕನಸಿನ ಮಾತಾಗಿತ್ತಂತೆ. ಆದರೆ ಇತ್ತೀಚೆಗೆ ಅಂದರೆ ಸ್ವಾತಂತ್ರ್ಯದ ನಂತರ ಕಾಲಕ್ರಮೇಣ ಅಭಿವೃದ್ಧಿ ಹೊಂದುತ್ತಾ ಬಂದಿದೆ. ಈಗ ಇಡೀ ಕೋಟೆ ತಾಲ್ಲೂಕಿಗೆ ಹೆಸರುವಾಸಿಯಾದ ಅಭಿವೃದ್ಧಿ ಹೊಂದುತ್ತಿರುವ ಹಳ್ಳಿಯಾಗಿ ಕಂಡುಬರುತ್ತಿದೆ. ಈಗ ಈ ಹಳ್ಳಿಗೆ ಸುವರ್ಣ ಗ್ರಾಮ ಯೋಜನೆಯ ಫಲವೂ ದೊರೆಯುತ್ತಿದೆ.

ಕ್ಯಾತನಹಳ್ಳಿ ಶೈಕ್ಷಣಿಕವಾಗಿ ಇತ್ತೀಚೆಗೆ ಮುಂದುವರೆಯುತ್ತಿರುವ ಹಳ್ಳಿ, ಹಿಂದೆ ಮಕ್ಕಳನ್ನು ಶಾಲೆಗೆ ಸೇರಿಸದೇ ಕೂಲಿ ಕೆಲಸಕ್ಕೋ, ಹೊಲದ ಕೆಲಸಕ್ಕೋ. ಮನೆಯ ಕೆಲಸಕ್ಕೋ ಹಾಕಿಕೊಳ್ಳುತ್ತಿದ್ದರು. ನಮ್ಮ ತಾತನ ತಲೆಮಾರಿನ ನಂತರ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಲು ಆರಂಭವಾಯಿತು. ತದನಂತರ ನಮ್ಮೂರಿನಲ್ಲಿ ಕೇವಲ ಕಿರಿಯ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳು ಮಾತ್ರ ಇದ್ದವು. ಹೈಸ್ಕೂಲಿಗೆ ೨ ಕಿ.ಮೀ. ದೂರ ನಡೆಯಬೇಕಾಗಿತ್ತು. ಈಗಲೂ ಇದೇ ಪರಿಸ್ಥಿತಿಯನ್ನು ಕಾಣಬಹುದು. ಪದವಿಪೂರ್ವ ಕಾಲೇಜಿಗೆ ಹೋಗಬೇಕೆಂದರೆ ನಮ್ಮೂರಿನಿಂದ ೧೦ ಕಿ.ಮೀ. ದೂರದ ಕರಿಮುದ್ದನಹಳ್ಳಿ ಎಂಬ ಊರಿಗೆ ಹೋಗಬೇಕಾಗಿತ್ತು. ಈಗಲೂ ಅಲ್ಲಿಗೇ ಹೋಗಬೇಕು ಅಥವಾ ಮೈಸೂರು ನಗರಕ್ಕೆ ಹೋಗಬೇಕು. ಇಷ್ಟೆಲ್ಲಾ ತೊಂದರೆಗಳಿದ್ದರೂ ಸಹ ನಮ್ಮೂರಿನಲ್ಲಿ ಇತ್ತೀಚೆಗೆ ಒಳ್ಳೆ ಸರ್ಕಾರಿ ಹುದ್ದೆಗಳಿಗೆ ಹೋಗಿರುವುದನ್ನು ಗಮನಿಸಬಹುದು. ತಹಶೀಲ್ದಾರರು, ಕ್ಷೇತ್ರ ಶಿಕ್ಷಣಾಧಿಕಾರಿ, ವೈದ್ಯರು, ಅಭಿಯಂತರರು, ಹೈಸ್ಕೂಲಿನ ಮುಖ್ಯೋಪಾದ್ಯಾಯರು, ಅಧ್ಯಾಪಕರು, ಕಿರಿಯ ಸಹಾಯಕರು, ಹಿರಿಯ ಸಹಾಯಕರು, ಉಪನ್ಯಾಸಕರು ಹಾಗೂ ಸಾಕಷ್ಟು ಪೊಲೀಸರನ್ನು ಕಾಣಬಹುದು. ಯಾವುದೇ ಜಾತಿ, ವರ್ಗ ಎಂಬ ತಾರತಮ್ಯಗಳಿಲ್ಲದೆ, ಎಲ್ಲರ ಸಹಕಾರದೊಂದಿಗೆ ಸರ್ಕಾರಿ ಹುದ್ದೆಗಳನ್ನು ಗಿಟ್ಟಿಸಿಕೊಳ್ಳುತ್ತಿದ್ದಾರೆ.

ಇದರಿಂದಾಗಿ ಕ್ಯಾತನಹಳ್ಳಿಯು ಶೈಕ್ಷಣಿಕವಾಗಿ ಮುಂದುವರಿದು, ಇದರಿಂದ ಅಲ್ಲಿನ ಜನರ ಜೀವನ ಮಟ್ಟ ಉತ್ತಮವಾಗಿ ಕ್ಯಾತನಹಳ್ಳಿ ಅಭಿವೃದ್ಧಿಯತ್ತ ಸಾಗುತ್ತಿದೆ.

ನಂತರ ಆಧುನಿಕ ಪರಿವರ್ತನೆಯಲ್ಲಿ ಇನ್ನೊಂದು ಪ್ರಮುಖವಾಗಿ ಕಂಡುಬರುವ ಅಂಶವೆಂದರೆ 'ಗ್ರಾಮೋದ್ಯೋಗ'. ಗ್ರಾಮೋದ್ಯೋಗದಲ್ಲಿ ಕ್ಯಾತನಹಳ್ಳಿ ಜನರು ಸಣ್ಣಮಟ್ಟ ವ್ಯಾಪಾರಗಳನ್ನು ಮಾಡುವುದು, ವ್ಯವಸಾಯ, ಗುಡಿ ಕೈಗಾರಿಕೆ, ಸಣ್ಣ ಕೈಗಾರಿಕೆ, ತೋಟಗಾರಿಕೆ, ಹೀಗೆ ಅನೇಕ ಪ್ರಕಾರಗಳನ್ನು ಕಾಣಬಹುದಾಗಿದೆ. ಕೂಲಿಗಾಗಿ ಕಾಳು ಯೋಜನೆ, ಗ್ರಾಮ ಸಡಕ್ ಯೋಜನೆ ಸುವರ್ಣ ಗ್ರಾಮೀಣ ಹೀಗೆ ಸರ್ಕಾರ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಹಮ್ಮಿಕೊಂಡು ಗ್ರಾಮೋದ್ಯಗಕ್ಕೆ ಪೂರಕವಾಗಿ ನಿಂತಿದೆ. ಹಾಗೆಯೇ ಗ್ರಾಮೀಣ ಪ್ರದೇಶಗಳಲ್ಲಿ ಹೈನುಗಾರಿಕೆ, ಕುರಿಸಾಕಾಣೆ, ಹಂದಿ ಸಾಕಾಣೆ, ಕುಕ್ಕುಟೋದ್ಯಮ ಪ್ರಮುಖವಾಗಿ ಕಂಡುಬರುತ್ತವೆ. ನಮ್ಮೂರಿನಿಂದ ಸುಮಾರು ೩ ಕಿ.ಮೀ. ದೂರದ ಆಲನಹಳ್ಳಿಯಲ್ಲಿ ಹಾಲಿನ ಡೈರಿ ಇದ್ದು, ನಮ್ಮೂರಿನಲ್ಲಿ ಉತ್ಪಾದನೆಯಾದ ಹಾಲನ್ನು ಆ ಡೈರಿಗೇ ಹಾಕುತ್ತಾರೆ. ಇನ್ನು ಗ್ರಾಮದಲ್ಲಿ ಕುರಿಸಾಕಾಣಿಕೆಯ ಪ್ರಮುಖ ಉದ್ಯೋಗವಾಗಿದೆ. ಬೇರೆ ಬೇರೆ ಕಡೆಗಳಿಂದ ಜನರು, ವ್ಯಾಪಾರಸ್ಥರು ಇಲ್ಲಿಗೆ ಬಂದು ಕುರಿ, ಆಡುಗಳನ್ನು ಕೊಂಡುಕೊಳ್ಳುತ್ತಾರೆ ಅಥವಾ ಇಲ್ಲಿನ ಜನರೇ ನಗರ-ಪಟ್ಟಣಗಳಿಗೆ ಹೋಗಿ ಮಾರಾಟ ಮಾಡಿಬರುತ್ತಾರೆ.

ಗುಡಿ ಕೈಗಾರಿಕೆ, ಸಣ್ಣಕೈಗಾರಿಕೋದ್ಯಮವೂ ಇಲ್ಲಿ ಜನಪ್ರಿಯವಾದಂತಹದ್ದು, ಗುಡಿ-ಸಣ್ಣ ಕೈಗಾರಿಕೆಗಳಲ್ಲಿ ಹಗ್ಗ ಹೊಸೆಯುವುದು, ತೆಂಗಿನ ನಾರಿನಿಂದ ಹಗ್ಗ, ಚಾಪೆ, ಕಾಲು ಒರೆಸುವ ಚಾಪೆಗಳನ್ನು ಮಾಡುತ್ತಾರೆ. ಹಾಗೆ ಮರಗೆಲಸ, ಮಡಿಕೆ ತಯಾರಿಸುವುದು ಪ್ರಮುಖವಾದ ಉದ್ಯೋಗವಾಗಿ ಕಂಡುಬರುತ್ತದೆ. ಮರಗೆಲಸದಲ್ಲಿ ಮಸಿಯ ಪೀಠೋಪಕರಣಗಳನ್ನು ತಯಾರಿಸಿ ಮಾರುವುದು, ಮನೆಗಳಿಗೆ ಮರಗೆಲಸ ಮಾಡುವುದು, ಮುಖ್ಯವಾದದ್ದು, ಹಾಗೆಯೇ ಇಲ್ಲಿ ಮಡಿಕೆಗಳು, ಕುಡಿಕೆಗಳನ್ನೂ ತಯಾರಿಸುತ್ತಾರೆ. ಇದಕ್ಕೆ ಸುತ್ತಮುತ್ತಲಿನ ಹಳ್ಳಿಗಳಲ್ಲಿ ತುಂಬಾ ಬೇಡಿಕೆಗೆ ಇದೆ. ಇನ್ನು ಅಗಸರು ಬಟ್ಟೆ ತೊಳೆಯುವುದೂ ಒಂದು ಗ್ರಾಮೋದ್ಯೋಗವಾಗಿ ಕಂಡುಬರುತ್ತದೆ. ಇವರು ವಾರ್ಷಿಕವಾಗಿ ಕಾಳು-ಕಡ್ಡಿ ದವಸ ಧಾನ್ಯಗಳನ್ನು ಪ್ರತಿಫಲವಾಗಿ ಪಡೆಯುತ್ತಾರೆ ಅಥವಾ ಹಣವನ್ನೇ ಪಡೆಯುತ್ತಾರೆ.

ಕ್ಯಾತನಹಳ್ಳಿಯಲ್ಲಿ 'ಮುಂದುವರೆದ ಶಿಕ್ಷಣ ಕೇಂದ್ರ' ಎಂಬ ಕೇಂದ್ರವನ್ನೂ ತೆರೆಯಲಾಗಿದೆ. ಇಲ್ಲಿ ಸಂಜೆಯ ವೇಳೆ ಅನಕ್ಷರಸ್ಥರಿಗೆ ವಿದ್ಯಾಭ್ಯಾಸ ಮಾಡಿಸಲಾಗುತ್ತದೆ. ಇಲ್ಲಿ ಸಾರ್ವಜನಿಕರಿಗೆ ಸಹಾಯಕವಾಗಲೆಂದು ಗ್ರಂಥಾಲಯವೂ

ಇದೆ. ಇದರಿಂದ ಹಲವಾರು ಜನರಿಗೆ, ವಿದ್ಯಾರ್ಥಿಗಳಿಗೆ ಸಹಾಯಕವಾಗಿದೆ. ಇಲ್ಲಿ ಹಲವಾರು ನಿರುದ್ಯೋಗಿಗಳಿಗೆ ಕೆಲಸವನ್ನೂ ನೀಡಲಾಗಿದೆ. ಇದು ಭಾನುವಾರ ಹೊರತುಪಡಿಸಿ ಪ್ರತಿದಿನವೂ ಸಂಜೆ ೫.೦೦ರಿಂದ ರಾತ್ರಿ ೯.೦೦ರವರೆಗೆ ತೆರೆದಿರುತ್ತದೆ. ನಮ್ಮೂರಿನ ಅನೇಕ ಅನಕ್ಷರಸ್ಥರಿಗೆ ಈ ಶಿಕ್ಷಣ ಕೇಂದ್ರವೇ ಅಕ್ಷರಸ್ಥರನ್ನಾಗಿ ಮಾಡಿದೆ. ಇದು ಗ್ರಾಮೋದ್ಯಗಕ್ಕೂ ಕ್ಯಾತನಹಳ್ಳಿಯ ಆಧುನಿಕ ಪರಿವರ್ತನೆಗೂ ಪೂರಕವಾದ ಅಂಶಗಳಲ್ಲೊಂದಾಗಿದೆ.

ಕ್ಯಾತನಹಳ್ಳಿ ಗ್ರಾಮ ಪಂಚಾಯ್ತಿಯು ಗ್ರಾಮೋದ್ಯೋಗಕ್ಕೆ ಹೆಚ್ಚು ಒತ್ತು ನೀಡುತ್ತಿದೆ. ಇದು ತನ್ನ ಪಂಚಾಯ್ತಿ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಹಮ್ಮಿಕೊಳ್ಳುತ್ತದೆ. ಚರಂಡಿ ವ್ಯವಸ್ಥೆ, ಕುಡಿಯುವ ನೀರಿನ ವ್ಯವಸ್ಥೆ, ಕೆರೆಗಳ ಹೂಳು ತೆಗೆಸುವುದು, ರಸ್ತೆ ರಿಪೇರಿ ಅಗಲೀಕರಣ ಹೀಗೆ ಆಧುನಿಕ ಸ್ಪರ್ಶ ನೀಡುವುದರ ಜೊತೆಗೆ ಗ್ರಾಮದ ಜನರಿಗೆ ಗ್ರಾಮೋದ್ಯೋಗವನ್ನು ಒದಗಿಸಿ, ಅವರ ಬದುಕಿಗೆ ಬೆಳಕಾಗಿ ನಿಂತಿದೆ. ಇದು ಪ್ರತೀ ಊರಿನಲ್ಲೂ ಕಾವಲುಗಾರರನ್ನು ನೇಮಿಸಿದೆ. ಕುಡಿಯುವ ನೀರು ಬಿಡುವುದಕ್ಕೆ ಕೆಲಸಗಾರರನ್ನು ನೇಮಿಸಿದೆ. ಹೀಗೆ ಉದ್ಯೋಗವನ್ನೂ ಕಲ್ಪಿಸಿಕೊಟ್ಟಿದೆ. ಒಟ್ಟಿನಲ್ಲಿ ಪಂಚಾಯ್ತಿಯ ನಿರುದ್ಯೋಗಿಗಳಿಗೆ ಉದ್ಯೋಗ ಕಲ್ಪಿಸಿಕೊಡುತ್ತಿದೆ ಎಂದು ಹೇಳಬಹುದಾಗಿದೆ.

ಇನ್ನು, ಇದರ ಆಧುನಿಕ ಪರಿವರ್ತನೆಯ ಹಾದಿಯಲ್ಲಿ ದಾರಿಮಾಡಿಕೊಟ್ಟ ಮತ್ತೊಂದು ಅಂಶವೆಂದರೆ 'ಕೌಶಲ್ಯ ಹೊಂದಿರುವಂತಹ ಮಹಿಳೆಯರು ಮತ್ತು ಪುರುಷರ' ಪ್ರೋತ್ಸಾಹ ಕ್ಯಾತನಹಳ್ಳಿಯಲ್ಲಿ ಮಹಿಳೆ, ಪುರುಷರೆಂಬ ಬೇಧಭಾವಗಳಿಲ್ಲದೆ ತಮ್ಮ ತಮ್ಮ ಕೌಶಲಗಳನ್ನು ತೋರಿಸಿಕೊಳ್ಳುತ್ತಾರೆ. ಸಣ್ಣಪುಟ್ಟ ಕೆಲಸಕಾರ್ಯಗಳಿಂದ ಹಿಡಿದು ದೊಡ್ಡ ದೊಡ್ಡ ಕೆಲಸಗಳವರೆಗೆ ಪ್ರತೀ ಕೆಲಸಗಳನ್ನೂ ಮಾಡುತ್ತಾರೆ. ಮಹಿಳೆಯರು ಬುಟ್ಟಿ ಹೆಣೆಯುವುದು, ಚಾಪೆ ಹೆಣೆಯುವುದನ್ನು, ತರಾವರಿ ರಂಗೋಲಿ ಬಿಡುವುದು, ಜಾನಪದ ಸಾಹಿತ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದು, ಇಟ್ಟಿಗೆಗಳನ್ನು ತಯಾರಿಸುವುದು, ಕುಕ್ಕೆ, ಮೊರಗಳನ್ನು ತಯಾರಿಸಿ ಅವಕ್ಕೆ ಸಗಣಿ ಮೆತ್ತುವುದು, ರಾಗಿ ಬೀಸುವುದು ಮುಖ್ಯವಾದ ಕೌಶಲಗಳನ್ನು ಕಾಣಬಹುದು. ಹಳ್ಳಿಗಳಲ್ಲಿ ವಿದ್ಯುತ್ತಿನ ಸಮಸ್ಯೆ ಮುಖ್ಯವಾಗಿ ಕಂಡುಬರುವಂತಹ ಸಮಸ್ಯೆ ಇದರ ನಡುವೆ ಅವರು ದಿನನಿತ್ಯದ ಊಟಕ್ಕೆ ಬೇಕಾದ ರಾಗಿ ಹಿಟ್ಟು, ಅಕ್ಕಿ, ದಿನಸಿಗಳನ್ನು ತಾವೇ ಸ್ವತಃ ಬೀಸುಕಲ್ಲಿನಿಂದ ಹಿಟ್ಟುಮಾಡಿಕೊಳ್ಳುತ್ತಾರೆ. ಒನಕೆಯಿಂದ ಭತ್ತವನ್ನು ಅಕ್ಕಿಮಾಡಿಕೊಳ್ಳುತ್ತಾರೆ. ಹಾಲಿನಿಂದ ಮೊಸರು ಮಾಡಿ, ಅದರಿಂದ ಬೆಣ್ಣೆ ತುಪ್ಪ ಮಾಡಿಕೊಳ್ಳುತ್ತಾರೆ. ಗದ್ದೆಗಳಲ್ಲಿ ಸಿಗುವ ಚೋಳು ಮಣ್ಣನ್ನು ಬಳಸಿಕೊಂಡು ಬಟ್ಟೆ ಒಗೆಯುತ್ತಾರೆ. ಯಂತ್ರಗಳ

ಸಹಾಯವಿಲ್ಲದೆ ಗಾಣದಿಂದ ಎಣ್ಣೆ ತೆಗೆಯುತ್ತಾರೆ. ಹಾಗೆ ಇಲ್ಲಿನ ಪುರುಷರು ಕರಕುಶಲ ವಸ್ತುಗಳನ್ನು ತಯಾರಿಸುತ್ತಾರೆ. ಮಡಿಕೆ ಕುಡಿಕೆಗಳನ್ನು ತಯಾರಿಸುತ್ತಾರೆ. ಯಂತ್ರಗಳ ಸಹಾಯವಿಲ್ಲದೆ ಜಮೀನುಗಳಲ್ಲಿ ಸಾಲುಗಳನ್ನು ಹೊಡೆದು ಬಿತ್ತನೆ ಮಾಡುತ್ತಾರೆ. ನೇರವಾಗಿ ಹೇಳಬೇಕೆಂದರೆ ನಗರದ ಯಾವುದೇ ಆಧುನಿಕ ಉಪಕರಣಗಳ ಸಹಾಯವಿಲ್ಲದೇ ಇಲ್ಲಿನ ಜನರು ತಮ್ಮ ಕೈಗಳಿಂದಲೇ ಇಲ್ಲಿ ಸಿಗುವ ದಿನನಿತ್ಯದ ವಸ್ತುಗಳಿಂದಲೇ ತಮ್ಮ ಕುಶಲತೆ ತೋರಿಸುತ್ತಾರೆ. ಇದು ಆರ್ಥಿಕ ಹೊರೆಯನ್ನು ಕಡಿಮೆ ಮಾಡಿಸಿ ಅಭಿವೃದ್ಧಿ ಪರಿವರ್ತನೆಗೆ ಮೂಲಕಾರಣವಾಗುತ್ತಿದೆ.

ಈ ಗ್ರಾಮದ ವೇಷಭೂಷಣಗಳು ಹೆಚ್ಚಿನ ಬದಲಾವಣೆಯನ್ನು ಪಡೆದಿವೆ ಆಹಾರ ಪಾನೀಯಗಳಲ್ಲೂ ಸಹಾ ಹೊಸತನವನ್ನು ಕಾಣಬಹುದು. ಅವರ ಆಚರಣೆ, ನೀತಿ ನಿಯಮಗಳಲ್ಲೂ ಸಹ ಪರಿವರ್ತನೆಯನ್ನು ಕಾಣಬಹುದಾಗಿದೆ. ನವ ನಾಗರಿಕತೆಯನ್ನು ತಮ್ಮ ಜೀವನದ ಉಸಿರಾಗಿ ಇಲ್ಲಿನ ಜನರು ಪಡೆದುಕೊಂಡಿದ್ದಾರೆ ಎನ್ನಬಹುದು. ಜಿಡ್ಡು ಹಿಡಿದ, ನಿಂತ ನೀರಿನಂತೆ ನಿಂತಲ್ಲೇ ನಿಂತಿರುವ ಈ ಸಂಸ್ಕೃತಿಯು ಇಲ್ಲಿ ಚೈತನ್ಯದ ಚಿಲುಮೆಯಾಗಲು ಈ ಆಧುನೀಕತೆಯೇ ಕಾರಣವಾಗಿದೆ. ಇಲ್ಲಿ ಜನರು ಸಾಧಾರಣ ಬಟ್ಟೆಗಳನ್ನು ತೊಡುತ್ತಿದ್ದರು. ಯಾವುದೋ ಆಧುನಿಕ ಸ್ಪರ್ಶಕ್ಕೆ ಒಳಗಾದ, ಸೋಕದಂತಹ, ಹಳ್ಳಿಯ ವಾತಾವರಣಕ್ಕೆ, ಬಿಸಿಲನ್ನು, ತಾಪವನ್ನು ತಡೆಯುವ, ಚಳಿಗಾಲದಲ್ಲಿ ಬೆಚ್ಚಗಿಡುವಂತಹ ವಸ್ತ್ರಗಳನ್ನು ತೊಡುತ್ತಿದ್ದರು. ಆದರೆ ಜನಸಂಪರ್ಕ ಹೆಚ್ಚಾದಂತೆ ಜನರ ಜೀವನದ ಆಧುನಿಕ ಕಲ್ಪನೆ ಜನಕ್ಕೆ ಬಂದ ಮೇಲೆ ತಮ್ಮ ವೇಷಭೂಷಣವನ್ನೇ ಬದಲಾಯಿಸಿಕೊಂಡಿದೆ. ಕುಡಿಯುವ ನೀರಿನ ಸಮಸ್ಯೆ ಎದುರಿಸುತ್ತಿದ್ದ ಇಲ್ಲಿನ ಜನರು ಈ ಪಂಪ್‌ಸೆಟ್ ಮೂಲಕ, ಸರ್ಕಾರದ ಕುಡಿಯುವ ನೀರಿನ ಯೋಜನೆಗಳ ಮೂಲಕ ಇಲ್ಲಿಗೆ ಕುಡಿಯುವ ನೀರಿನ ವ್ಯವಸ್ಥೆ ಮಾಡಲಾಗಿದೆ. ಅನೇಕ ಮೈಲುಗಳು ದೂರ ನಡೆದುಹೋಗಿ ಶಿಕ್ಷಣ ಕಲಿಯುತ್ತಿದ್ದ ಇಲ್ಲಿನ ಮಕ್ಕಳಿಗೆ ಇಲ್ಲೇ ಪದವಿಪೂರ್ವ ಕಾಲೇಜು ತೆರೆದು ವಿದ್ಯಾಭ್ಯಾಸಕ್ಕೆ ಅವಕಾಶ ಕಲ್ಪಿಸಲಾಗಿದೆ.

ಅಕ್ಕಪಕ್ಕದ ಊರಿನ ಜನರು, ನಗರವಾಸಿಗಳು ಹೆಚ್ಚಾಗಿ ಈ ಊರಿಗೆ ಬರುತ್ತಾರೆ. ಹಬ್ಬಗಳ – ಜಾತ್ರೆಗಳ ವೇಳೆ ಇಲ್ಲಿ ಮೋಜಿನ ತಾಣಗಳೇ ತಲೆಎತ್ತುತ್ತವೆ. ಮೋಜಿಗಾಗಿ, ಕಾಲ ಕಳೆಯಲು ಬರುವವರು ಜಗಳವಾಡಿ ಪ್ರಾಣ ಕಳೆದುಕೊಳ್ಳುವ ವಿಪರ್ಯಾಸದ ಸಂಗತಿಗಳೂ ಇಲ್ಲಿ ಸರ್ವೇಸಾಮಾನ್ಯವಾಗಿಬಿಟ್ಟಿವೆ. ಆಧುನಿಕತೆ–ಯಿಂದಾಗಿ ಅವರ ಭಾಷೆಯಲ್ಲೂ ಸಹ ವ್ಯತ್ಯಾಸವನ್ನು ಕಾಣಬಹುದು. ಇಲ್ಲಿನ ಪಕ್ಕದಲ್ಲೇ ಚಾಮಲಾಪುರ ಉಷ್ಣ ವಿದ್ಯುತ್ ಸ್ಥಾವರ ಸ್ಥಾಪಿಸುವ ಬಗ್ಗೆ ಸರ್ಕಾರ ಸಮ್ಮತಿ ಸೂಚಿಸಿ ಭೂ ಸ್ವಾಧೀನ ಮಾಡಿಕೊಳ್ಳಬೇಕೆಂದು ಸರ್ಕಾರ ತಿಳಿಸಿದಾಗ ಇಲ್ಲಿನ ರೈತರು,

ಸಂಘ ಸಂಸ್ಥೆಗಳು ಹೋರಾಡಿ ಆ ಸ್ಥಾವರ ಸ್ಥಾಪನೆಯನ್ನು ನಿಲ್ಲಿಸಿದರು. ಇದು ಆಧುನಿಕತೆಯಿಂದ ಮಾತ್ರ ಸಾಧ್ಯವಾಯಿತು ಎಂದೇಳಬಹುದು.

ಒಟ್ಟಾರೆಯಾಗಿ ಆಧುನಿಕತೆಯ ಬೆಳಕಿನಡಿಯಲ್ಲಿ ಇಲ್ಲಿನ ಜನತೆಯು ನಾಗರಿಕತೆಯ ಜೀವನವನ್ನು ನಡೆಸುತ್ತಿದ್ದಾರೆ. ಜನತೆಯು ಆಧುನಿಕ ವೇಷಭೂಷಣ-ಗಳಲ್ಲಿ ಅವರ ಜೀವನ ವ್ಯವಸ್ಥೆ ಬದಲಾವಣೆ ಹೊಂದಿರುವುದನ್ನು ಗಮನಿಸ-ಬಹುದಾಗಿದೆ. ಮುಖ್ಯವಾಗಿ ಅವರ ಆಹಾರಪದ್ಧತಿಯಲ್ಲಂತೂ ಹಿಂದಿನದಕ್ಕಿಂತ ಈಗ ತುಂಬಾ ಬದಲಾವಣೆಯನ್ನು ಕಾಣಬಹುದಾಗಿದೆ. ಜೊತೆಗೆ ಅವರ ವಸ್ತ್ರದಲ್ಲಿ ನಡವಳಿಕೆಗಳಲ್ಲಿಯೂ ಕಾಣಬಹುದಾಗಿದೆ. ಮೈಸೂರು ನಗರವು ಇಲ್ಲಿಂದ ಕೆಲವೇ ಮೈಲುಗಳಷ್ಟು ದೂರ ಇರುವುದರಿಂದ ಇಲ್ಲಿನ ಜನರು ಹೆಚ್ಚಾಗಿ ನಗರದ ಸಂಪರ್ಕವನ್ನು ಇಟ್ಟುಕೊಂಡಿರುವುದರಿಂದ ಮೈಸೂರಿಗೆ ಕೆಲಸಕ್ಕೆ ಕೂಲಿಗೆ, ವ್ಯಾಪಾರಕ್ಕೆ ಹೋಗುವವರು ಬಹುಬೇಗನೆ ನಗರ ಜೀವನ, ನಗರ ಸಂಸ್ಕೃತಿಗೆ ಒಳಗಾಗುತ್ತಿದ್ದಾರೆ. ಈಗ ಪ್ರತಿಯೊಬ್ಬರ ಕೈಯಲ್ಲೂ ಮೊಬೈಲ್‌ಗಳು ಗುನುಗುಡುತ್ತಿವೆ. ನಗರಕ್ಕೆ ಹೋಗುವವರ ಪ್ರತಿಯೊಬ್ಬರ ಬಳಿಯೂ ದ್ವಿಚಕ್ರವಾಹನಗಳನ್ನು ಇಟ್ಟುಕೊಂಡಿದ್ದಾರೆ. ಒಟ್ಟಾರೆ ತುಂಬಾ ಬದಲಾವಣೆಗೆ ಒಳಗಾಗಿದ್ದಾರೆ. ಇಷ್ಟೆಲ್ಲಾ ಆಧುನಿಕತೆಯನ್ನು ಹೊಂದಿದ್ದರೂ ಜನರು ತಾವು ಆಚರಿಸಿಕೊಂಡು ಬಂದ ಆಚರಣೆಗಳು, ನಂಬಿಕೆಗಳು, ಸಂಪ್ರದಾಯಗಳು ರೀತಿನೀತಿಗಳಲ್ಲಿ ಸ್ವಲ್ಪ ವ್ಯತ್ಯಾಸವಿದ್ದರೂ ಅವುಗಳನ್ನು ಹಾಗೇ ಕಾಪಾಡಿಕೊಂಡು ಬರುವಲ್ಲಿ ಯಶಸ್ವಿಯಾಗಿದ್ದಾರೆ ಎಂದೇಳಬಹುದು.

# ಉಪಸಂಹಾರ

ಜನಪದ ಸಾಹಿತ್ಯವಿಲ್ಲದ ಯಾವ ಸಮಾಜವೂ ಇಲ್ಲ. "ಜನವಾಣಿ ಬೇರು ಕವಿವಾಣಿ ಹೂವು" ಎಂಬಂತೆ ಜನವಾಣಿಯೇ ಈ ಜನಪದ ಸಾಹಿತ್ಯ, ಕವಿವಾಣಿ ನಂತರದ ಸಾಹಿತ್ಯವಾಗಿದೆ. ಏಕೆಂದರೆ ಮಾನವನ ಅನುಭವಗಳು ಅಭಿವೃದ್ಧಿ ಪಡೆಯಲು ಹಾತೊರೆಯುತ್ತಿರುತ್ತವೆ. ಅಭಿವ್ಯಕ್ತಿಯ ಒಂದು ಪ್ರಕಾರ ಶೂನ್ಯವಾಗಿರು-ವುದರಿಂದ ಅದರ ಅಧ್ಯಯನದ ಮೂಲಕ ಮಾನವನ ಜೀವನ ಅವನ ನಡವಳಿಕೆ, ನಂಬಿಕೆ, ಅನಿಸಿಕೆ, ಸಂಸ್ಕೃತಿ ಹಾಗೂ ಅವನ ಮೇಲಾಗಿರುವ ನಾಗರಿಕತೆಯ ಪ್ರಭಾವಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ಈ ರೀತಿಯ ಅಂಶಗಳು ಇಂದಿಗೂ ಇರುವುದರಿಂದ ಜನಪದ ಸಾಹಿತ್ಯದ ಮೂಲಕ ಅರಿಯುವ ಪ್ರಯತ್ನ ಈ ಕ್ಯಾತನಹಳ್ಳಿ ಕುರಿತ ಸಾಂಸ್ಕೃತಿಕ ಅಧ್ಯಯನ ವಿಶ್ಲೇಷಣೆಯು ಪ್ರಯೋಜನಕಾರಿಯಾಗಿದೆ ಎಂಬುದನ್ನು ಮರೆಯುವಂತಿಲ್ಲ.

ಈ ಕ್ಷೇತ್ರಕಾರ್ಯಕ್ಕೆ ಕ್ಯಾತನಹಳ್ಳಿ, ಚಾಮಲಾಪುರ, ಆಲನಹಳ್ಳಿ ಮುಂತಾದ ಗ್ರಾಮಗಳ ಸುತ್ತಮುತ್ತಲಿನ ಜನರಿಂದ ದೊರೆತ ಮಾಹಿತಿಗಳು ಪುರಾಣ ಮತ್ತು ಚರಿತ್ರೆಯಲ್ಲಿ ದೊರೆತ ಮಾಹಿತಿ ಸಮೀಕ್ಷೆಗಳಿಂದ ಸಾಂಸ್ಕೃತಿಕವಾಗಿ ವಿಶ್ಲೇಷಿಸಲಾಗಿದೆ. ಇದರಿಂದ ಅಕ್ಕಪಕ್ಕದ ಪ್ರದೇಶಗಳಿಗೂ ಅನ್ವಯವಾಗುವಂತಹ ಸಾಂಸ್ಕೃತಿಕ ಸಾಮಾಜಿಕ, ರಾಜಕೀಯ ಧರ್ಮ ಆಚಾರ, ವಿಚಾರಗಳು ಮುಂತಾದವುಗಳನ್ನು ಒಳಗೊಂಡಿದೆ. ದೈವದ ವಿಚಾರ ಬಂದಾಗ ಎಂತಹ ಕಲಹಗಳಿದ್ದರೂ ಅವುಗಳನ್ನು ಮರೆತು ಎಲ್ಲರೂ ಒಟ್ಟಾಗಿ ಸೇರಿ ಜಾತ್ರೆ ಹಬ್ಬಗಳನ್ನು ಆಚರಿಸಿಕೊಂಡು ಹೋಗುವ ಮೂಲಕ ಮಾನವೀಯ ಸಂಬಂಧಗಳನ್ನು ಬೆಸೆಯುವ ಪ್ರಯತ್ನವನ್ನು ಮಾಡುತ್ತಿವೆ. ಎಂತಹ ಕಷ್ಟದ ಸನ್ನಿವೇಶವನ್ನು ಎದುರಿಸಲು ಮತ್ತು ಕಷ್ಟಸುಖದಲ್ಲಿ ದೇವರ, ದೈವತ್ವದ ಮೊರೆ ಹೋಗುವುದನ್ನು ನೋಡಬಹುದಾಗಿದೆ. ದೇವರನ್ನು ನಂಬಿ, ಆ ನಂಬಿಕೆಯಲ್ಲೇ ಉತ್ತಮ ಜೀವನವನ್ನು ತಿಳಿಯಬಹುದು.

ನಾಗರಿಕತೆಯ ಮಟ್ಟವನ್ನು ತಲುಪಿದರೂ ಸಹ ಮಾನವನು ದೇವರು, ಧರ್ಮ, ಹುಟ್ಟು ಸಾವುಗಳಿಗೆ ಭಯವನ್ನು ವ್ಯಕ್ತಪಡಿಸಿರುವುದರಿಂದ ಆದಿಮಾನವನ ಭೀತಿಗೂ ನಾಗರಿಕತೆಯ ಅಡಿಯಲ್ಲಿ ಬೆಳೆಯುತ್ತಿರುವುದರಿಂದ ಆದಿಮಾನವನ ಭೀತಿಗೂ ನಾಗೀಕತೆಯ ಅಡಿಯಲ್ಲಿ ಬೆಳೆಯುತ್ತಿರುವ ಈ ಜನರ ಭೀತಿಗೂ ಯಾವುದೇ ವ್ಯತ್ಯಾಸವನ್ನು ನೋಡಲು ಸಾಧ್ಯವಾಗದೇ ಇರಬಹುದು. ಆದರೂ ನಾಗರಿಕನಾದ ಮಾನವ ಭಯದ ವಾತಾವರಣದಲ್ಲೇ ಇನ್ನು ಬದುಕುತ್ತಿರುವುದು. ಮಾನವನ

ದೌರ್ಬಲ್ಯವನ್ನು ಕಾರಣವಾಗಿರಬಹುದು. ಹುಟ್ಟಿನಿಂದ ಸಾಯುವವರೆಗೂ ಮಾನವನ ಒಂದಲ್ಲ ಒಂದು ರೀತಿಯ ಸಂಪ್ರದಾಯ ಆಚರಣೆಗಳಿಗೆ ಕಟ್ಟುಬಿದ್ದಿರುತ್ತಾನೆ. ಅವುಗಳನ್ನು ಆಚರಿಸುತ್ತಾ ವಿಶೇಷ ಸಂದರ್ಭಗಳಲ್ಲಿ ಹಬ್ಬ ಹರಿದಿನಗಳಲ್ಲಿ ನಡೆಸುವ ಉಪಾಸನಗಳು ವಿಧಿಯ ಆಚರಣೆಗಳು ಗಂಭೀರ ಸ್ವರೂಪವನ್ನು ಪಡೆದು ಇಂದೂ ಆಚರಣೆಯಲ್ಲಿ ಉಳಿದಿವೆ. ಹೀಗೆ ಕ್ಷೇತ್ರಕಾರ್ಯದ ಮೂಲಕ ಇಂತಹ ಪುರಾಣ ಚರಿತ್ರೆಯ ಹಿಂದಿರುವ ಸತ್ಯ ಘಟನೆಗಳನ್ನು ಕ್ರೂಢೀಕರಿಸಿ ರಚಿಸಿರುವಂತಹ ಸಾಹಿತ್ಯ ಬಹುಮುಖ್ಯವಾಗಿದೆ. ಇತಿಹಾಸ ವಸ್ತುವನ್ನು ಆದಾರವಾಗಿಟ್ಟುಕೊಂಡು ಸಮಕಾಲೀನ ಬದುಕನ್ನು ಚಿಂತಿಸಬಹುದು ಮತ್ತು ಮುಂದಿನ ಪೀಳಿಗೆಗೆ ಇದು ಇತಿಹಾಸವಾಗಿ ಪರಿಗಣಿಸಬಹುದು. ಹಾಗಾಗಿ ಕ್ಷೇತ್ರಕಾರ್ಯದ ಮೂಲಕವಾಗಿ ಇಂತಹ ಅನೇಕ ಸಂಗತಿಗಳನ್ನು ಕಲೆಹಾಕುವ ಪ್ರಯತ್ನ ಈ ಅಧ್ಯಯನದ ಉದ್ದೇಶವಾಗಿದೆ.

ಕ್ಯಾತನಹಳ್ಳಿ ಗ್ರಾಮವು ಅಧುನಿಕತೆಗೆ ಒಳಗಾಗಿ ಹೆಚ್ಚು ಹೆಚ್ಚು ಜನಸಂಪರ್ಕವನ್ನು ಪಡೆದರೂ ಸಹ ಅವರ ವೇಷಭೂಷಣಗಳಲ್ಲಿ ಬದಲಾವಣೆಯನ್ನು ಪಡೆದರೂ ಸಹ ಅವುಗಳ ಜೊತೆಯಲ್ಲಿಯೇ ತನ್ನ ಸಂಸ್ಕೃತಿಯನ್ನು ಉಳಿಸಿಕೊಂಡು ಬರುತ್ತಿದೆ. ಆದ್ದರಿಂದ ಇಲ್ಲಿನ ಜನರ ಜೀವನದ ಪ್ರತಿಯೊಂದು ಮೆಟ್ಟಿಲು ಬಹು ಅರ್ಥಪೂರ್ಣವಾದವುಗಳಾಗಿವೆ. ಇಲ್ಲಿನ ದೇವಾಲಯಗಳು ಕರ್ನಾಟಕದ ಸಾಂಸ್ಕೃತಿಕತೆಯನ್ನು ಸಾರಿ ಹೇಳುವ ಮಟ್ಟಿಗೆ ಬೆಳೆದುನಿಂತಿವೆ. ಇಲ್ಲಿನ ದೇವಾಲಯಗಳು ಕರ್ನಾಟಕದ ಸಾಂಸ್ಕೃತಿಕತೆಯನ್ನು ಸಾರಿ ಹೇಳುವ ಮಟ್ಟಿಗೆ ಬೆಳೆದುನಿಂತಿವೆ. ಇಲ್ಲಿನ ಜನರ ಸಾಮಾಜಿಕ, ಸಾಂಸ್ಕೃತಿಕ, ಜನಪದೀಯ ಅಂಶಗಳು ಮತ್ತು ಗುಣಗಳು ಗತಕಾಲದ ವೈಭವಕ್ಕೆ ಸಾಕ್ಷಿಯಾಗಿದೆ. ಈ ಸಂದರ್ಭದಲ್ಲಿ ಈ ಕ್ಷೇತ್ರದ ಅಧ್ಯಯನವನ್ನು ಕೈಗೊಂಡಿರುವುದು ಕ್ಯಾತನಹಳ್ಳಿಯ ಸಾಂಸ್ಕೃತಿಕ ವೈಭವದ ಪ್ರಾಮುಖ್ಯತೆಯ ಅರಿವಾಗುತ್ತದೆ.

# ಅನುಬಂಧ

## ವಕ್ತೃಗಳ ಪರಿಚಯ:

ಮೀನಿಗೆ ನೀರಿರುವಂತೆ ಕ್ಷೇತ್ರಕಾರ್ಯಕ್ಕೆ ಮಾಹಿತಿಯನ್ನು ನೀಡುವವರು ಅಷ್ಟೇ ಮುಖ್ಯ. ಈ ಮಾಹಿತಿ ಒದಗಿಸಿಕೊಡುವವರನ್ನು ವಕ್ತೃಗಳೆಂದು ಕರೆಯುತ್ತೇವೆ. ಈ ವಕ್ತೃಗಳೇ ಈ ನಿಬಂಧಕ್ಕೆ ಜೀವ ತುಂಬಿರುವ ನಿರ್ಮಾತೃಗಳು.

| ಕ್ರ. ಸಂ. | ಹೆಸರು | ಸ್ಥಳ | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ |
|---|---|---|---|---|---|---|
| ೧. | ಶಿವಣ್ಣ | ಕ್ಯಾತನಹಳ್ಳಿ | ೪೫ | ಲಿಂಗಾಯತ | ಪಿ.ಯು.ಸಿ. | ಪೂಜಾರಿ |
| ೨. | ಕಾಳಸ್ವಾಮಪ್ಪ | ಕ್ಯಾತನಹಳ್ಳಿ | ೬೮ | ಲಿಂಗಾಯತ | ಪ್ರಾಥಮಿಕ | ವ್ಯವಸಾಯ |
| ೩. | ಚಿಕ್ಕಯ್ಯ | ಚಾಮಲಾಪುರ | ೩೨ | ಕುರುಬ | ಇಲ್ಲ | ಕಾವಲುಗಾರ |
| ೪. | ತಾಯಮ್ಮ | ಕ್ಯಾತನಹಳ್ಳಿ | ೬೨ | ಮಡಿವಾಳ | ಇಲ್ಲ | ಕೂಲಿ |
| ೫. | ರಂಗಯ್ಯ | ಕ್ಯಾತನಹಳ್ಳಿ | ೫೦ | ಪರಿಶಿಷ್ಟಜಾತಿ | ಇಲ್ಲ | ಕೂಲಿ |
| ೬. | ನಾಗರಾಜು | ಕ್ಯಾತನಹಳ್ಳಿ | ೪೯ | ಕುಂಬಾರ | ಬಿ.ಎ. | ವ್ಯವಸಾಯ |
| ೭. | ಮುಳ್ಳಯ್ಯ | ಕ್ಯಾತನಹಳ್ಳಿ | ೬೪ | ಪರಿಶಿಷ್ಟ ವರ್ಗ | ಇಲ್ಲ | ಪೂಜಾರಿ |
| ೮. | ಸುಬ್ಬಣ್ಣ | ಕ್ಯಾತನಹಳ್ಳಿ | ೫೩ | ಬ್ರಾಹ್ಮಣ | ಬಿ.ಎ. | ಪೋಸ್ಟ್‌ಮನ್ |
| ೯. | ತಮ್ಮಯ್ಯ | ಸಿಂಗರಮಾರನಹಳ್ಳಿ | ೪೮ | ಪರಿಶಿಷ್ಟ ವರ್ಗ | ಇಲ್ಲ | ಕೂಲಿ |
| ೧೦. | ಚಿಕ್ಕೂಸಪ್ಪ | ಕ್ಯಾತನಹಳ್ಳಿ | ೫೮ | ಲಿಂಗಾಯತ | ಪಿ.ಯು.ಸಿ. | ವ್ಯವಸಾಯ |
| ೧೧. | ಹುಚ್ಚಯ್ಯ | ಕ್ಯಾತನಹಳ್ಳಿ | ೬೨ | ಕುರುಬ | ಇಲ್ಲ | ವ್ಯವಸಾಯ |
| ೧೨. | ಮಾರಯ್ಯ | ಶಿಂಡೇನಹಳ್ಳಿ | ೫೭ | ಕುರುಬ | ಇಲ್ಲ | ಕೂಲಿ |

# ಪರಾಮರ್ಶನ ಗ್ರಂಥಗಳು

೧) ಕೃಷ್ಣಮೂರ್ತಿ ಜೆ – ಸಂಸ್ಕೃತಿ ಸಂಗತಿ: ಬೆಂಗಳೂರು ಶಿಕ್ಷಣ ಕೇಂದ್ರ, ಪ್ರಕಾಶಕರು: ಬೆಂಗಳೂರು : ೨೦೦೧.

೨) ಚಿದಾನಂದಮೂರ್ತಿ ಎಂ – ಸಂಶೋಧನೆ: ಡಿ.ವಿ.ಕೆ. ಮೂರ್ತಿ ಪ್ರಕಾಶಕರು: ಮೈಸೂರು, ೨೦೦೨.

೩) ಚಂದ್ರಪೂಜಾರಿ ಎಂ – ಸಂಶೋಧಕರು ಮತ್ತು ಕ್ಷೇತ್ರಕಾರ್ಯ : ಕನ್ನಡ ವಿಶ್ವವಿದ್ಯಾನಿಲಯ ಪ್ರಕಾಶನ, ಹಂಪಿ: ೨೦೦೫.

೪) ನಾಗರಾಜು ಡಿ.ಆರ್. – ಸಂಸ್ಕೃತಿ ಕಥನ : ಅಗ್ರಹಾರ ಕೃಷ್ಣಮೂರ್ತಿ (ಸಂ): ಸುವರ್ಣ ಸಿರಿಮಾಲೆ ಪ್ರಕಾಶಕರು: ೨೦೦೨.

೫) ನಾಯಕ್ ಡಿ.ಬಿ. – ದೇಸಿ ಸಂಸ್ಕೃತಿ : ಬಂಜಾರ ಪ್ರಕಾಶನ, ೨೦೦೨.

೬) ರಹಮತ್ ತರೀಕೆರೆ – ಪ್ರತಿ ಸಂಸ್ಕೃತಿ : ಅಭಿನವ ಪ್ರಕಾಶನ : ೧೯೯೩.

೭) ಡಾ॥ ಅಂಬಳಿಕೆ ಹಿರಿಯಣ್ಣ – ಜಾನಪದ ವೀಕ್ಷಣೆ : ಪ್ರಜ್ವಲ ಪ್ರಕಾಶನ : ಮೈಸೂರು ೧೯೮೭.

೮) ವಿ.ವಿ.ನಾವಡ – ಜಾನಪದ ಸಮಾಲೋಚನೆ : ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ : ೧೯೩೯.

೯) ಎಂ.ಎಂ.ಕಲುಬುರ್ಗಿ, ಜಾನಪದ ಮಾರ್ಗ: ಲಕ್ಷ್ಮಿಪ್ರಿಂಟಿಂಗ್ಸ್ ಅಂಡ್ ಪಬ್ಲಿಕೇಷನ್ ಹೌಸ್, ಮೈಸೂರು, ೧೯೯೫.

೧೦) ಸಿ.ಎಸ್.ಶಿವಕುಮಾರಸ್ವಾಮಿ, ಕರ್ನಾಟಕ ಜಾತ್ರೆಗಳು: ಮೈಸೂರು ವಿಶ್ವವಿದ್ಯಾನಿಲಯ, ಪ್ರಸಾರಂಗ, ೧೯೮೮.

೧೧) ದೇ.ಜವರೇಗೌಡ, ಜಾನಪದ ಅಧ್ಯಯನ, ಚೇತನಬುಕ್‌ಹೌಸ್, ಮೈಸೂರು, ೧೯೯೧.

೧೨) ಒಗಟುಗಳು, ಸಂಗ್ರಹ, ನವೋದಯ ಪ್ರಕಾಶನ, ಚಿತ್ರದುರ್ಗ

೧೩) ರಾಜಪ್ಪ ದಳವಾಯಿ, ಕನ್ನಡಸಾಹಿತ್ಯ ಕೋಶ, ರಾಘವೇಂದ್ರ ಪ್ರಕಾಶನ, ಬೆಂಗಳೂರು, ೧೯೯೬.



ಹಾಲರವಿ ಹೊತ್ತಿರುವುದು ಮತ್ತು ಹಲಗೆ ಕಟ್ಟಿರುವುದು



ಮಹದೇಶ್ವರ ವಿಗ್ರಹ ಪೂಜೆ



ಕೊಂಡದೇವರು ಕಟ್ಟುತ್ತಿರುವುದು



ದುಂಡುಮಾರಮ್ಮ

